ಉಪನ್ಯಾಸ ಗ್ರಂಥಮಾಲೆ

೩೪೬

# ಎಲ್ಲಮ್ಮನ ಜೋಗತಿಯರು ಹಾಗೂ ದೇವದಾಸಿ ಪದ್ಧತಿ

ಡಾ. ಎನ್. ಕೆ. ಕಡೆತೋಟದ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಜುಲೈ ೧೯೮೩

ಉಪನ್ಯಾಸ ಗ್ರಂಥಮಾಲೆ

೩೪೬

# ಎಲ್ಲಮ್ಮನ ಜೋಗತಿಯರು ಹಾಗೂ ದೇವದಾಸಿ ಪದ್ಧತಿ

ಡಾ. ಎಸ್. ಕೆ. ಕಡೆತೋಟದ

ಎಂ.ಎ., ಸಾಹಿತ್ಯರತ್ನ, ಪಿಎಚ್.ಡಿ.




ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಜುಲೈ ೧೯೮೩

ಪ್ರಕಾಶಕರು :

**ಎಸ್. ಬಿ. ನಾಯಕ**
ಕಾರ್ಯನಿರ್ವಾಹಕ ನಿರ್ದೇಶಕರು,
ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು
ಜುಲೈ, ೧೯೮೩



ಬೆಲೆ : **೫೦ ಪೈಸೆ**

ಮುದ್ರಕರು :

**ಅಶೋಕ ಎಲ್. ಆಕಳವಾಡಿ**
ವಾಸವಿ ಪ್ರಿಂಟರ್ಸ್
ಬ್ಯಾಂಕ ರೋಡ, ಧಾರವಾಡ-೫೮೦ ೦೦೧

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು, ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ,ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ

ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮುನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೪೫ ಪುಸ್ತಿಕೆಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಡಿ. ಎಂ. ನಂಜುಂಡಪ್ಪ
ಕುಲಪತಿಗಳು

## ಅರಿಕೆ

ಈ ಪ್ರಬಂಧವು ಬೆಳಗಾಂವಿ ಜಿಲ್ಲೆಯು ಸವದತ್ತಿ ಹತ್ತಿರದ ಎಲ್ಲಮ್ಮನ ಗುಡ್ಡದಲ್ಲಿ ೧೯೮೦ ನೆಯ ಇಸ್ವಿಯ ಸಪ್ಟಂಬರ ೧೨ ನೆಯ ದಿನಾಂಕದಂದು ಕರ್ನಾಟಕ ವಿಶ್ವವಿದ್ಯಾಲಯದ **ಪ್ರಸಾರಾಂಗವು** ಏರ್ಪಡಿಸಿದ್ದ 'ಎಲ್ಲಮ್ಮನ ಜೋಗತಿಯರು ಹಾಗೂ ದೇವದಾಸಿಯರು' ಎಂಬ ಭಾಷಣದ ಸಾರವಾಗಿದೆ. ಜೋಗತಿಯರು ಹಾಗೂ ದೇವದಾಸಿಯರುಗಳ ಬಗ್ಗೆ ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದವರು ವಿರಳ. ಇನ್ನೂ ಅನೇಕ ಧಾರ್ಮಿಕ ಪಂಥಗಳ ಹಾಗೂ ಅವುಗಳ ಸಂಪ್ರದಾಯಗಳ ಬಗ್ಗೆ ನಮ್ಮ ದೇಶದಲ್ಲಿ ಅಭ್ಯಾಸ ಮಾಡಬೇಕಾದದ್ದು ಬಹಳಷ್ಟು ಇದೆ. ಇಂಥ ಸಂಪ್ರದಾಯಗಳು ಅಳಿದು ಹೋಗುವ ಈ ನವಯುಗದಲ್ಲಿ ಇವನ್ನು ಆದಷ್ಟು ಬೇಗ ಅಭ್ಯಾಸ ಮಾಡಿ ನಮ್ಮ ಗತ ಸಮಾಜಗಳ ಸಂಪ್ರದಾಯಗಳನ್ನು ಕಾಯ್ದಿಡುವದು ಒಳ್ಳೆಯದು ಎಂದು ಐತಿಹಾಸಿಕ ಸಂಸ್ಕೃತಿಗಳ ಅಧ್ಯಯನದಲ್ಲಿ ತೊಡಗಿದ ನನಗೆ ಅನಿಸುತ್ತದೆ. ಈ ದಿಶೆಯಲ್ಲಿ ಎಲ್ಲಮ್ಮನ ಜೋಗತಿಯರು ಹಾಗೂ ದೇವದಾಸಿ ಪದ್ಧತಿ ಓದುಗರ ಆಸ್ಥೆಯನ್ನು ಕೆರಳಿಸುವದೆಂದು ಆಶಿಸಿದ್ದೇನೆ.

ಈ ಭಾಷಣವನ್ನು ಪುಸ್ತಿಕೆಯನ್ನಾಗಿ ಮಾಡಲು ಪ್ರೋತ್ಸಾಹಿಸಿದ ಪ್ರಸಾರಾಂಗದ ಆಗಿನ ನಿರ್ದೇಶಕರಾದ

ಶ್ರೀಮಾನ ಚೆನ್ನವೀರ ಕಣವಿಯುವರಿಗೂ ಹಾಗೂ ಈಗಿನ ಕಾರ್ಯ ನಿರ್ವಾಹಕ ನಿರ್ದೇಶಕರಾದ ಶ್ರೀಮಾನ್ ಎಸ್. ಬಿ. ನಾಯಕ ಅವರಿಗೂ, ಇನ್ನಿತರ ಅಧಿಕಾರಿಗಳಿಗೂ ನನ್ನ ಕೃತಜ್ಞತೆಗಳು.

ಮಾನವಶಾಸ್ತ್ರ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ **ಡಾ. ಎನ್. ಕೆ. ಕಡೆತೋಟದ**
ಧಾರವಾಡ–೫೮೦ ೦೦೩

# ಪರಿವಿಡಿ

# ೧. ಎಲ್ಲಮ್ಮನ ಜೋಗತಿಯರು

ದೇವದಾಸಿ ಪದ್ಧತಿಯು ಒಂದು ಸಂಪ್ರದಾಯವಾಗಿ ಭಾರತದಲ್ಲಿ ಬೆಳೆದಿರುವಂತೆ, ಎಲ್ಲಮ್ಮನ ಜೋಗತಿಯರ ಪದ್ಧತಿಯು ಉತ್ತರ ಕರ್ನಾಟಕದಲ್ಲಿ ಹಾಗೂ ದಕ್ಷಿಣ ಮಹಾರಾಷ್ಟ್ರದ ಕೆಲವು ಜಿಲ್ಲೆಗಳಲ್ಲಿ ಚಿಕ್ಕ ಸಂಪ್ರದಾಯವಾಗಿ ( little Tradition) ಬೆಳೆದು ಬಂದಿದೆ.

'ಎಲ್ಲಮ್ಮ', 'ರೇಣುಕಾ' ಅಥವಾ 'ಏಕವೀರಾ' ಎಂಬ ಹೆಸರಿನ ಪೌರಾಣಿಕ ಸ್ತ್ರೀಯ ಕಥೆಯ ಮೇಲೆ ಜೋಗತಿಯರ ಪದ್ಧತಿಯು ಬೆಳೆದು ಬಂದಿದೆ. ಸ್ಕಂದ ಪುರಾಣದ ಸಂಹ್ಯಾದ್ರಿ ಖಂಡದಲ್ಲಿ ಮತ್ತು ಇನ್ನಿತರ ಪುರಾಣಗಳಲ್ಲಿ ಅನೇಕ ಋಷಿ ಪುಂಗವರು ಇದನ್ನು ವಿವರಿಸಿದ್ದಾರೆ. ಸ್ಕಂದ ಪುರಾಣದ ಪ್ರಕಾರ ರೇಣುಕಾ ದೇವಿಯು ಕಾಶ್ಮೀರದಲ್ಲಿ ರೇಣುಕ ಎಂಬ ರಾಜನು ಯಜ್ಞ ಮಾಡಿದಾಗ ಹುಟ್ಟಿದವಳು. ವಿಶ್ವಾಮಿತ್ರನ ಬಂಧುವಾದ ಜಮದಗ್ನಿಯು ಋಚಿಕ ಮತ್ತು ಸತ್ಯವತಿ ಎಂಬ

ಋಷಿ ದಂಪತಿಗಳ ಮಗನು. ರೇಣುಕಾ ಮತ್ತು ಜಮದಗ್ನಿ ಇವರೀರ್ವರು ಸ್ವಯಂವರ ರೀತಿಯ ಮದುವೆಯಾಗುತ್ತಾರೆ. ಈ ದಂಪತಿಗಳಿಗೆ ಐದು ಜನ ಗಂಡು ಮಕ್ಕಳು, ಕೆಲವು ಪುರಾಣ ಗಳ ಪ್ರಕಾರ ಇವರಿಗೆ ನಾಲ್ಕು ಜನ ಗಂಡು ಮಕ್ಕಳು. ಈ ಗಂಡು ಮಕ್ಕಳಲ್ಲಿ ಕೊನೆಯುದವನಾದ ಪರಶುರಾಮನು ವಿಷ್ಣು-ವಿನ ಅವತಾರವೆಂದು ಹಿಂದೂಗಳು ನಂಬಿದ್ದಾರೆ. ಈ ಪೌರಾಣಿಕ ಕತೆಯು ಮಹಾಸಂಪ್ರದಾಯದ (Great Tradition) ಎಂದೂ ಜನರಿಗೆ ಪೂಜ್ಯವಾದುದು.

ಬೆಳಗಾಂವಿ ಜಿಲ್ಲೆಯ ಸವದತ್ತಿಯ (ಪರಸಗಡದ) ಹತ್ತಿರ ಎಲ್ಲಮ್ಮನ ಗುಡ್ಡದಲ್ಲಿ ರಾಮಾಯಣಕ್ಕಿಂತಲೂ ಪೂರ್ವದಲ್ಲಿ ನಡೆಯಿತೆನ್ನಲಾದ ಪೌರಾಣಿಕ ಋಷಿಯಾದ ಜಮದಗ್ನಿಗೆ ರೇಣುಕೆಯು ಪ್ರತಿದಿನವು ಮಲಪ್ರಭಾ (ಮಲಪಹಾರಿ) ನದಿ ಯಿಂದ ಉಸುಕಿನ ಮಡಿಕೆ ತಯಾರಿಸಿ ಸರ್ಪವನ್ನೇ ಸಿಂಬೆಯ-ನ್ನಾಗಿ ಮಾಡಿ ನೀರು ತರಬೇಕಾಗುತ್ತಿತ್ತು. (ಇಲ್ಲಿ ಏಳು ಕೊಳ್ಳ ಗಳಿರುವದರಿಂದ ಎಲ್ಲಮ್ಮನಿಗೆ ಏಳು ಕೊಳ್ಳದ ಎಲ್ಲಮ್ಮನೆಂದು ಕರೆಯುತ್ತಾರೆ.) ಒಮ್ಮೆ ಅವಳು ಮಲಪಹಾರೀ ನದಿಯಲ್ಲಿ ಗಂಧರ್ವ ದಂಪತಿಗಳು ಸ್ನಾನ ಮಾಡುವದನ್ನು ಕಂಡು ಆಕರ್ಷಿ ತಳಾಗಿದ್ದರಿಂದ ಆವಳ ಕರ್ತವ್ಯದಲ್ಲಿ ಚ್ಯುತಿಯಾಗುತ್ತದೆ. ಆಗ ರೇಣುಕಾದೇವಿಯು ಜಮದಗ್ನಿ ಋಷಿಯ ಶಾಪಕ್ಕೆ ಗುರಿಯಾಗಿ ಕುರುಪಿಯಾಗಿ, ಆಶ್ರಮದಿಂದ ಹೊರತಳ್ಳಲ್ಪಡುತ್ತಾಳೆ. ಇಂಥ ಪರಿಸ್ಥಿತಿಯಲ್ಲಿ ಅಡವಿಯಲ್ಲಿ ತಿರುಗಾಡುತ್ತಿರುವಾಗ ನಾಥ ಸಂಪ್ರದಾಯದ ಶೈವ ಋಷಿಗಳಾದ ಏಕನಾಥ ಮತ್ತು

ಜೋಗಿನಾಥರನ್ನು ಬೆಟ್ಟಿಯಾಗುತ್ತಾಳೆ. ಈ ಜೋಗಿಗಳು ಅವಳಿಗೆ ಸಹಾಯ ಮಾಡಲು ಜೋಗುಳ (ಜೋಗಿಗಳ) ಬಾವಿಯಲ್ಲಿ ಸ್ನಾನಮಾಡಿಸಿ ಉದರ ನಿರ್ವಾಹಣೆಗಾಗಿ ಐದು ಮನೆಗಳಿಂದ ಭಿಕ್ಷೆ ಬೇಡಲು 'ಹಡಲಗಿ' (ಬುಟ್ಟಿ) ಯನ್ನು ಕೊಡುತ್ತಾರೆ. ಆದರಿಂದಾಗಿ ರೇಣುಕಾದೇವಿಯು ತನ್ನ ದೈಹಿಕ ಪೂರ್ವ ಸೌಂದರ್ಯವನ್ನು ಹೊಂದುತ್ತಾಳೆ. ನಂತರ ತನ್ನ ಪತಿ ಜಮದಗ್ನಿ ಋಷಿಯ ಬಳಿಗೆ ಮರಳಿ ಹೋಗುತ್ತಾಳೆ. ಪರರಿಂದ ಶಾಪ ವಿಮೋಚನೆ ಪಡೆದು ತನ್ನ ಮುಂದೆ ಬಂದ ಈಕೆಯನ್ನು ನೋಡಿ ಋಷಿಗೆ ಮತ್ತೆ ಕೋಪ ಬಂದು ಅವಳ ತಲೆಯನ್ನು ಕಡಿದು ಹಾಕಲು ಒಬ್ಬೊಬ್ಬರಾಗಿ ತನ್ನ ಮೊದಲ ನಾಲ್ಕು ಮಕ್ಕಳಿಗೆ ಹೇಳುತ್ತಾನೆ. ಅವರು ತಮ್ಮ ತಂದೆಯ ಆಜ್ಞೆಯನ್ನು ನಿರಾಕರಿಸಲು ಅವರಿಗೂ ಶಾಪ ಕೊಡುತ್ತಾನೆ. ಕೊನೆಯ ಮಗ ಪರಶುರಾಮನು (ನಪುಂಸಕರಾದ ಈ ನಾಲ್ಕು ಮಕ್ಕಳು ಜೋಗಪ್ಪಗಳಾಗಿ ತಮ್ಮ ತಾಯಿಯ ಭಕ್ತರಾಗುತ್ತಾರೆ. ಇವರಿಂದ ಜೋಗಪ್ಪಗಳ ಸಾಂಪ್ರದಾಯ ಹುಟ್ಟುತ್ತದೆಂದು ಭಾವಿಸಲಾಗಿದೆ. ಈ ಕಾರಣದಿಂದ ಎಲ್ಲಮ್ಮನ ಭಕ್ತರು ಮತ್ತು ಜೋಗತಿಯರು ಪರಾಕು ಹಾಕುವಾಗ 'ಎಲ್ಲಮ್ಮ ನಿನ್ನಾಲ್ಕು ಉಧೋ ಉಧೋ, ಎಂದು ಹೇಳಿ ಆ ನಾಲ್ವರನ್ನು ಸ್ಮರಿಸುತ್ತಾರೆ.) ತಂದೆಯ ಅಪ್ಪಣೆಯ ಮೇರೆಗೆ ತಾಯಿಯ ತಲೆಯನ್ನು ತನ್ನ ಕೊಡಲಿಯಿಂದ ಕಡಿದು ಹಾಕುತ್ತಾನೆ. ಇದರಿಂದ ಪ್ರೀತನಾದ ತಂದೆ ಅವನಿಗೆ ಎರಡು ವರಗಳನ್ನು ಕೇಳುವಂತೆ ಹೇಳುತ್ತಾನೆ. ಪರಶುರಾಮನು ಈ ವರ

ಗಳಿಂದ ತನ್ನ ತಾಯಿ ಮತ್ತು ಸಹೋದರರನ್ನು ಮೊದಲಿನ ಸ್ವರೂಪಕ್ಕೆ ಬರುವಂತೆ ಮಾಡುತ್ತಾನೆ. ಮತ್ತು ತಂದೆಯು ಸಿಟ್ಟು ಇಳಿಯುವಂತೆ ಮಾಡುತ್ತಾನೆ.

ಇನ್ನೊಂದು ಪುರಾಣದ ಪ್ರಕಾರ: 'ಜಮದಗ್ನಿ' ಋಷಿಯ ಹತ್ತಿರವಿದ್ದ ಕಾಮಧೇನುವಾದ ಆಕಳನ್ನು ಪಡೆಯಲು ಅರಸನಾದ ಕಾರ್ತ್ಯವೀರನು ಪ್ರಯತ್ನಿಸಿ ವಿಫಲನಾಗುತ್ತಾನೆ. ಆಗ ಅರಸನು ಜಮದಗ್ನಿಗೆ ೨೧ ಗಾಯಗಳನ್ನು ಮಾಡಿ ಕೊಂದು ಹಾಕುತ್ತಾನೆ. ತನ್ನ ತಂದೆಗಾದ ಅವಮಾನವನ್ನು ಕಂಡು ಸಿಟ್ಟಿಗೆದ್ದ ಪರಶುರಾಮನು ೨೧ ಸಲ ಪೃಥ್ವೀ ಪ್ರದಕ್ಷಿಣೆ ಮಾಡುವದಾಗಿಯೂ ಮತ್ತು ಕ್ಷತ್ರಿಯ ವೀರರನ್ನು ನಾಶ ಮಾಡುವದಾಗಿಯೂ ಪ್ರತಿಜ್ಞೆ ಮಾಡಿ ಎರಡು ಕುಟುಂಬಗಳನ್ನು ಹೊರತು ಪಡಿಸಿ ಎಲ್ಲ ಕ್ಷತ್ರಿಯ ವೀರರನ್ನು ನಾಶ ಮಾಡುತ್ತಾನೆ. ಆಗ ದಶರಥನು ವಿವಾಹ ಮಾಡಿಕೊಳ್ಳುತ್ತಿದ್ದನು ಮತ್ತು ಜನಕರಾಜನು ಯಜ್ಞದಲ್ಲಿ ತೊಡಗಿದ್ದನು. ಕ್ಷತ್ರಿಯ ವೀರರನ್ನು ನಾಶಪಡಿಸಿದ ನಂತರವೇ. ತಂದೆಯ ಶವ ಸಂಸ್ಕಾರ ಜರುಗುತ್ತದೆ. ಆಶ್ರಮಕ್ಕೆ ಹಿಂದಿರುಗಿದಾಗ ಆಗ ತನ್ನ ತಂದೆಯ ಸಂಸ್ಕಾರಕ್ಕೆ ಬೇಕಾಗಿದ್ದ ಗಂಗಾ, ಯಮುನಾ, ಮತ್ತು ಸರಸ್ವತಿ ನದಿಗಳ ಪವಿತ್ರ ನೀರಿಗಾಗಿ ತನ್ನ ಮೂರು ಬಾಣಗಳಿಂದ ಮೂರು ಕುಂಡಗಳನ್ನು ತೆಗೆದು ಇವನಿಗೂ ಮತ್ತು ಪವಿತ್ರ ನದಿಗಳಿಗೂ ಸಂಬಂಧ ಏರ್ಪಡಿಸುತ್ತಾನೆ. ಈ ಮೂರು ಕುಂಡಗಳಿಂದ ಪವಿತ್ರ ನೀರನ್ನು ತೆಗೆದುಕೊಂಡು ತನ್ನ ತಂದೆಯ ಶವಸಂಸ್ಕಾರವನ್ನು ನೆರವೇರಿಸುತ್ತಾನೆ. ಇಂದು

ಈ ಮೂರು ಕುಂಡಗಳು ಎಲ್ಲಮ್ಮನ ಗುಡ್ಡದಲ್ಲಿ ಎಣೆಕೊಂಡ, ಅರಿಷಿಣಕೊಂಡ ಮತ್ತು ಕುಂಕುಮಕೋಂಡ ಎಂದು ಹೆಸರಾಗಿವೆ. ಇವುಗಳಲ್ಲಿಯ ಪವಿತ್ರ ನೀರಿನಿಂದ ಯಾತ್ರಿಕರು, ಭಕ್ತರು ಮತ್ತು ಜೋಗತಿಯರು ಶುದ್ಧಗೊಳಿಸಲ್ಪಡುತ್ತಾರೆ.

ಇನ್ನೊಂದು ಪುರಾಣಕಥೆಯಂತೆ ಜಮದಗ್ನಿಯ ಶವಸಂಸ್ಕಾರವಾದಾಗ ಅವನ ವಿಷಯ ಆತನ ತಂದೆಗೆ ತಿಳಿಯುತ್ತದೆ. ಅವನು ತನ್ನ ತಪಸ್ಸಿನ ಶಕ್ತಿಯಿಂದ ಅಸ್ಥಿಯ ಮೇಲೆ ತನ್ನಲ್ಲಿಯ ಪವಿತ್ರ ನೀರನ್ನು ಸಿಂಪಡಿಸಿ ಜಮದಗ್ನಿಯನ್ನು ಮತ್ತೆ ಬದುಕಿಸಿದನೆಂದು ರೇಣುಕಾದೇವಿಯು ಪುನಃ ಈ ಮೂರು ತಿಂಗಳ ವೈಧವ್ಯದಿಂದ ಮುಕ್ತಳಾಗಿ ಮುತ್ತೈದೆ ಯಾಗುವಳೆಂದು ತಿಳಿದು ಬರುತ್ತದೆ. ಇದರ ಸಂಕೇತವಾಗಿ ಒಂದು ಸಂಪ್ರದಾಯವೇ ಹುಟ್ಟಿಕೊಂಡು ಎಲ್ಲಮ್ಮನ ಭಕ್ತರಾದ ಜೋಗತಿಯರು ವರ್ಷದಲ್ಲಿ ತಮ್ಮ ಬಳೆಗಳನ್ನು ಮೂರು ತಿಂಗಳು ತೆಗೆದು ವಿಧವೆಯರಂತೆ ವರ್ತಿಸುತ್ತಾರೆ.

ಬನದ ಹುಣ್ಣಿಮೆಯಿಂದ (ಪೌಷ್ಯ, ಜನವರಿ ದವನದ ಹುಣ್ಣಿಮೆಯ ಚೈತ್ರ, ಎಪ್ರಿಲ್ ವರೆಗೆ) ನಂತರ ಮತ್ತೆ ಹೊಸಬಳೆ ತೊಟ್ಟು ಮುತ್ತೈದೆಯರಾಗುತ್ತಾರೆ. ಬಳೆಗಳನ್ನು ಒಡೆಯುವುದು ಮತ್ತು ಹೊಸಬಳೆಗಳನ್ನು ಧರಿಸುವುದು ಸಾಂಪ್ರದಾಯಗಳಾಗಿ, ಬಂದಿವೆ. ಎಲ್ಲಮ್ಮನ ಭಕ್ತರೆಲ್ಲರು ಬೇವಿನ ಸೀರೆ ಉಡುವ ಒಂದು ಪದ್ಧತಿ ಇದೆ. ಪರಶುರಾಮನು ಕ್ಷತ್ರಿಯ ವೀರರನ್ನು ಮಾತ್ರ ಕೊಂದು ಅವರ ಸ್ತ್ರೀಯರನ್ನು ಮತ್ತು ಮಕ್ಕಳನ್ನು ಹಾಗೇಬಿಡುತ್ತಾನೆ. ಅವರೆಲ್ಲರೂ

ಬತ್ತಲೆಯಾಗಿಯೇ ರೇಣುಕಾದೇವಿಯ ಆಶ್ರಯ ಪಡೆಯಲು ಬರುತ್ತಾರೆ. ಆಗ ಪರಶುರಾಮ ಬೇವಿನ ಎಲೆಗಳನ್ನು ಕೊಟ್ಟು ಅದರಿಂದ ದೇಹ ಮುಚ್ಚಿಕೊಂಡು ತಾಯಿಯನ್ನು ಸಂದರ್ಶಿಸಲು ಹೋಗುವಂತೆ ಹೇಳುತ್ತಾನೆ. ಹೀಗೆ ರೇಣುಕಾ ದೇವಿಯಿಂದ ರಕ್ಷಿತರಾಗಿ ಇವರು ಅವಳನ್ನು ಪ್ರಸನ್ನ ಮಾಡಲು ಹಾಡಿ, ಕುಣಿದಾಡುತ್ತಾರೆ. ಆಗ ರೇಣುಕಾದೇವಿಯು ತನ್ನನ್ನು ಸ್ತುತಿಸುವ ಮೊದಲು ತನಗೆ ಸದ್ಗತಿ ನೀಡಿದ ಏಕನಾಥ ಮತ್ತು ಜೋಗಿನಾಥರನ್ನು ಮೊದಲು ಸ್ತುತಿಸಲು ಹೇಳಿದಳೆಂದು ತಿಳಿಯುತ್ತದೆ. ಇದರಿಂದಾಗಿ ಇಂದಿಗೂ ಜೋಗತಿಯರು ರೇಣುಕಾದೇವಿಯನ್ನು ಸ್ತುತಿಸುವ ಪೂರ್ವದಲ್ಲಿ ಏಕನಾಥ ಮತ್ತು ಜೋಗಿನಾಥರನ್ನು ಸ್ತುತಿಸುವ ಪದ್ಧತಿ ಉಳಿದು-ಕೊಂಡುಬಂದಿದೆ.

ಇಂದು ಜೋಗತಿಯರು ರೇಣುಕಾದೇವಿಯ ಸ್ತುತಿಗೆ ಮಾತಂಗಿಯನ್ನು ಪೂಜಿಸುವ ಬಗೆಗೆ ಇರುವ ಮತ್ತೊಂದು ದಂತಕಥೆಯು ಈ ರೀತಿ ಇದೆ :

ಒಮ್ಮೆ ರೇಣುಕಾದೇವಿಯು ಒಬ್ಬ ತೋಟಿಗನನ್ನು ಪರೀಕ್ಷಿ-ಸುವದಕ್ಕಾಗಿ ಒಬ್ಬ ಮುದುಕಿಯ ವೇಷದಿಂದ ಅವನ ತೋಟಕ್ಕೆ ಹೋಗುತ್ತಾಳೆ. ಅವನು ಈ ಮುದುಕಿಯನ್ನು ಕಳ್ಳಿ ಎಂದು ಭಾವಿಸಿ ಬೆನ್ನಟ್ಟುತ್ತಾನೆ. ಆಗ ರೇಣುಕಾದೇವಿಯು ಚರ್ಮ-ಗಾರರ ಮಾತಂಗಿಯಿಂದ ರಕ್ಷಣೆ ಪಡೆಯುತ್ತಾಳೆ. ತಮ್ಮ ರೇಣುಕೆಗೆ ಆಶ್ರಯನೀಡಿದ ಮಾತಂಗಿಯು ಅವರಿಗೆ ಪೂಜ್ಯಳಾ-ಗುತ್ತಾಳೆ. ಆದ್ದರಿಂದ ಇಂದಿಗೂ ಜೋಗತಿಯರು ರೇಣುಕಾ

ದೇವಿಯ ಪೂಜೆ ಮಾಡುವಾಗ ಮಾತಂಗಿಯನ್ನು ಪೂಜಿಸುತ್ತಾರೆ. ಅಲ್ಲದೆ ಪ್ರತಿಯೊಬ್ಬ ಸ್ತ್ರೀಯು ಜೋಗತಿತನದದೀಕ್ಷೆ ತೆಗೆದು-ಕೊಳ್ಳುವ ಮೊದಲು ಚರ್ಮಹದ ಮಾಡುವವರ ಮನೆಗೆ ಹೋಗಿ ಮಾಂತಗಿಕಟ್ಟೆಯ ನೀರಿನಿಂದ ಪರಿಶುದ್ಧವಾಗುತ್ತಾಳೆ. ಮತ್ತು ಐದುವಾರ ಮಾತಂಗಿಯನ್ನು ಪೂಜಿಸುತ್ತಾಳೆ. ಆ ಐದು ದಿನಗಳು ಮಂಗಳವಾರ ಅಥವಾ ಶುಕ್ರವಾರ ಆಗಿರಬೇಕು. ಜೋಗಪ್ಪ-ಜೋಗತಿಯರು ಉಪಯೋಗಿಸುವ ಚೌಡಿಕೆಯ ಬಗ್ಗೆಯೂ ದಂತಕಥೆ ಇದೆ. ಇದರ ಪ್ರಕಾರ ಬೇಟಸಂರನೆಂಬ ರಾಕ್ಷಸನು ಜನರಿಗೆ ತೊಂದರೆ ಕೊಡುವದನ್ನು ರೇಣುಕಾ-ದೇವಿಯು ತಿಳಿದು ಅವನ ಸಂಹಾರ ಮಾಡಲು ಪರಶುರಾಮನಿಗೆ ತಿಳಿಸುತ್ತಾಳೆ. ಆಗ ಪರಶುರಾಮನು ಆ ರಾಕ್ಷಸನನ್ನು ಯುದ್ಧದಲ್ಲಿ ಕೊಂದು ಅವನ ತಲೆ ಬುರಡೆಯನ್ನು ತೆಗೆದು ಅವನ ದೇಹದ ನರಗಳಿಂದ ತಂತಿಗಳನ್ನು ಮಾಡಿ 'ಚೌಡಿಕೆ' ಎಂಬ ವಾದ್ಯ ತಯಾರಿಸಿ ಅದನ್ನು ನುಡಿಸುತ್ತಾ ಬರುತ್ತಾನೆ. ಇದರ ಅನುಕರಣೆಯಾಗಿ ಇಂದಿಗೂ ಎಲ್ಲಮ್ಮನ ಭಕ್ತರಾದ ಜೋಗತಿ-ಯರು ಹಾಡುವಾಗ ಮತ್ತು ಕುಣಿಯುವಾಗ ಇದೇ ವಾದ್ಯವನ್ನು ಉಪಯೋಗಿಸುತ್ತಾರೆ.

**ಜೋಗತಿಯರ ದೀಕ್ಷಾ ಸಮಾರಂಭ :** (Initiation Ceremony) ಜೋಗತಿಯರಿಗೆ ದೀಕ್ಷೆ ಕೊಡಿಸುವ (Initiation) ವಿಧಿಯನ್ನು ರೇಣುಕಾದೇವಿಯ ಗುಡಿಯಲ್ಲಿ ಆಚರಿಸದೆ ಅದನ್ನು ರೇಣುಕಾದೇವಿಯ ಪೂಜಾರಿಗಳ ಮನೆ-ಯಲ್ಲಿ ನೆರವೇರಿಸಲಾಗುವದು. ದೀಕ್ಷಾ ವಿಧಿಯನ್ನು ಕೊಡುವ

ಪೂರ್ವದಲ್ಲಿ ಜೋಗತಿಯಾಗುವವರು ಗುಡ್ಡದ ಮೇಲಿನ ಮೂರು ಪವಿತ್ರ ಕೊಂಡಗಳಲ್ಲಿ ಸ್ನಾನ ಮಾಡಬೇಕಾಗುವದು. ಜೋಗತಿಯಾಗುವವರು ತಮ್ಮ ಸಂಬಂಧಿಕರೊಡನೆ ಮತ್ತು ಹಿರಿಯ ಜೋಗತಿಯರೊಡನೆ ವಾದ್ಯ ಸಮೇತವಾಗಿ ಕೈಯಲ್ಲಿ ನೈವೇದ್ಯವನ್ನು ಮತ್ತು ಕಾಣಿಕೆಗಳನ್ನು ತೆಗೆದುಕೊಂಡು ಪೂಜಾರಿಯ ಮನೆಗೆ ಹೋಗುವರು. ಆಗ ಅವರು ಕೈಯಲ್ಲಿ ಪರಶುರಾಮನ ಮೂರ್ತಿಯನ್ನು ಹಿಡಿದುಕೊಂಡಿರುವರು. ಪೂಜಾರಿಯ ಮನೆಯಲ್ಲಿ ರೇಣುಕಾದೇವಿಯನ್ನು ಮತ್ತು ಪರಶುರಾಮನನ್ನು ಪೂಜಿಸಲಾಗುವದು. ಹಿರಿಯ ಜೋಗತಿಯರು ಜೋಗತಿಯಾಗುವವರಿಗೆ ಕೊರಳಲ್ಲಿ ಹೂವಿನ ಹಾರವನ್ನು ಹಾಕುವರು. ಅನಂತರ ಪೂಜಾರಿಯು ದೈನಂದಿನ ಜೀವನದಲ್ಲಿ ಮಾಡಬೇಕಾದ ವ್ರತಗಳನ್ನು ಹಾಗೂ ಮಾಡಬಾರದ ಕೆಲಸಗಳನ್ನು (Taboos) ಉಪದೇಶಿಸುವನು. ಆ ಮೇಲೆ ಐದು ಮನೆಗಳಲ್ಲಿ ಆಕೆಯಿಂದ ಭಿಕ್ಷೆ ಬೇಡಿಸಲಾಗುವದು. ಜೋಗತಿಯು ತನ್ನ ಊರಿಗೆ ಹೋದ ಮೇಲೆ ಐದುದಿನಗಳ ವರೆಗೆ ಚರ್ಮಕಾರರ ಮನೆಯಲ್ಲಿಯ ಮಾತಂಗಿ ಕಟ್ಟೆಯ ನೀರಿನಿಂದ ಶುದ್ಧಳಾಗಿ ಮಾತಂಗಿಯನ್ನು ಪೂಜಿಸಬೇಕು ಮತ್ತು ಬಡವರಿಗೆ ಊಟ ಹಾಕಬೇಕು. ಇಷ್ಟು ಅಲ್ಲದೆ ವರ್ಷಕ್ಕೆ ಎರಡುಬಾರಿ ಒಮ್ಮೆ ರಂಡೆಹುಣ್ಣಿವೆಗೆ (ಬನದಹುಣ್ಣಿವೆಗೆ) ಮತ್ತೊಮ್ಮೆ ಮುತ್ತೈದೆ ಹುಣ್ಣಿವೆಗೆ (ದವನದ ಹುಣ್ಣಿವೆಗೆ) ಎಲ್ಲಮ್ಮನ ಗುಡ್ಡಕ್ಕೆ ಹೋಗಬೇಕು.

ದೀಕ್ಷಾಸಮಾರಂಭದ ಉಡುಪುಗಳು : ದೀಕ್ಷಾಸಮಾರಂಭಕ್ಕಾಗಿ ಜೋಗತಿಯರು ಮೂರುತರಹದ ಉಡುಪುಗಳಲ್ಲಿ

ಒಂದನ್ನು ಧರಿಸುವದಾಗಿ ರೇಣುಕಾದೇವಿಗೆ ಬೇಡಿಕೊಳ್ಳುತ್ತಾರೆ. ಮೊದಲನೆಯದು ದಿಗಂಬರವಾಗಿರುವದು. ಎರಡನೆಯದು ಬೇವಿನ ಉಡಿಗೆ, ಮೂರನೆಯದು ವಸ್ತ್ರದ ಉಡಿಗೆ, ಈ ಉಡುಪುಗಳನ್ನು ಒಂದು ರೀತಿಯಿಂದ ಶ್ರೇಣಿಭದ್ಧವಾಗಿ ತಿಳಿದುಕೊಳ್ಳಲಾಗಿದೆ. ದಿಗಂಬರರಾಗಿ ಇರುವವರು ಅದನ್ನು ಅತಿಕಟುಂಕರವಾದ ವಿಧಿ ಎಂದು ತಿಳಿದುಕೊಳ್ಳುತ್ತಾರೆ. ಅವರು ಜೋಗುಳ ಭಾವಿಯ ಹತ್ತಿರ ಮತ್ತು ರೇಣುಕಾ ದೇವಿಯ ಗುಡಿಯ ಹತ್ತಿರ ಮಾತ್ರ ನಗ್ನರಾಗಿರುತ್ತಾರೆ. ಅವರು ಮೂರು ವಿಧದ ಪೋಷಾಕುಗಳೊಂದಿಗೆ ಜೋಗುಳ ಭಾವಿಯಿಂದ ರೇಣುಕಾದೇವಿಯ ದೇವಾಲಯದವರೆಗೆ ಮಡಿಯಿಂದ ಕೂಡಿದವರಾಗಿ ನಡೆಯಬೇಕಾಗುವದು. ಅವರೊಡನೆ ವಾದ್ಯಗಾರರು ಮತ್ತು ಸಂಬಂಧಿಕರು ಇರುತ್ತಾರೆ. ದಿಗಂಬರವಾಗಿದ್ದವರು ಬೆಳಗಾಗುವದರ ಪೂರ್ವದಲ್ಲಿಯೇ ವಿಧಿಯನ್ನು ಮುಗಿಸುತ್ತಾರೆ. ಬೇವಿನ ಉಡಿಗೆಯನ್ನು ಮತ್ತು ಬಟ್ಟೆಯ ಪೋಷಾಕುಗಳನ್ನು ಹಾಕಿದ್ದರೆ ಬೆಳಗು ಮುಂಜಾನೆ ಮುಗಿಸುತ್ತಾರೆ. ಆವಾಗ ಜೋಗತಿಯಾಗುವವರಿಗೆ ಬೇವಿನ ಎಲೆಗಳ ಗೊಂಚಲದಿಂದ ಮುಖಕ್ಕೆ ಪವಿತ್ರ ನೀರನ್ನು ಸಿಂಪಡಿಸಲಾಗುವದು. ದೇವಾಲಯವನ್ನು ಮುಟ್ಟಿದ ನಂತರ ಜೋಗತಿಯಾಗುವವರು ದೇವಾಲಯಕ್ಕೆ ಪ್ರದಕ್ಷಣೆ ಹಾಕಿ ದೇವರುಗಳ ಹಾಗೂ ರೇಣುದೇವಿಯ ಪೂಜೆ ಮಾಡಿ ತಮ್ಮ ಉಡುಪುಗಳನ್ನು ಬದಲಿಸುತ್ತಾರೆ. ಈ ಉಡುಪಿನ ಮೆರವಣಿಗೆಯನ್ನು ಮುಗಿಸಿ ಪುನಃ ಕೊಂಡಗಳಲ್ಲಿ ಪವಿತ್ರ ಸ್ನಾನ ಮಾಡಿ ದೀಕ್ಷಾ ಸಮಾರಂಭಕ್ಕೆ ಸಿದ್ದರಾಗಬೇಕಾಗುವದು.

**ಜೋಗತಿಯರಲ್ಲಿ ವಿಧಗಳು :** ಎಲ್ಲಮ್ಮನ ಭಕ್ತರೆಲ್ಲರು ಒಂದಲ್ಲ ಒಂದು ಬಗೆಯ ಜೋಗತಿಗಳು ಆದರೆ ಅವರನ್ನು ವಿಶೇಷವಾಗಿ ಮೂರು ವಿಧ ಮಾಡಬಹುದು – (ಕೊರಳಲ್ಲಿ ಧರಿಸುವ ಮುತ್ತುಗಳ ಆಧಾರದಿಂದ). ೧. ಗರತಿ ಮುತ್ತು ೨. ಸೂಳೆ ಮುತ್ತು ೩. ಜೋಗತಿ ಮುತ್ತು ಧರಿಸಿದ ಜೋಗತಿಗಳು. ಗರತಿ ಜೋಗತಿಯು ಬಿಳಿಯ ಬಣ್ಣದ, ಸೂಳೆ ಜೋಗತಿಯರು ಕೆಂಪು ಬಣ್ಣದ ಮತ್ತು ಸಾಮಾನ್ಯ ಜೋಗತಿಯರು ಎರಡೂ ಬಣ್ಣದ ಮಿಶ್ರ ಮುತ್ತುಗಳ ಸರಗಳನ್ನು ಕೊರಳಲ್ಲಿ ಕಟ್ಟಿಕೊಳ್ಳುವರು. ಕೆಲವು ಶ್ರೀಮಂತ ಸ್ತ್ರೀಯರು ಜೋಗತಿಯಾದರೆ ಬಂಗಾರದ ತಗಡಿನಿಂದ ದೇವರ ಮೂರ್ತಿಗಳನ್ನು ಮಾಡಿಸಿ ಅವನ್ನು ತಮ್ಮ ತಾಳಿಯಲ್ಲಿ ಪೋಣಿಸಿ ಕೊರಳಲ್ಲಿ ಕಟ್ಟಿ ಕೊಳ್ಳುವರು. 'ಗರತಿ' ಮತ್ತು ಮುಂದುವೆ-ಯಾಗಿ ಜೀವನ ನಡೆಸುವ ಎಲ್ಲಮ್ಮನ ಎಲ್ಲ ಭಕ್ತರು ಇವನ್ನು ಧರಿಸಬೇಕು. ಇವರು ಯಾವದೇ ತರದ ಜಾತಿಮತ ವರ್ಗಗಳಿಂದ ಪ್ರತಿಬಂಧಿತವಾಗಿರುವದಿಲ್ಲ. ಆದ್ದರಿಂದ ಬ್ರಾಹ್ಮಣರಿಂದ ಹರಿಜನರವರೆಗೆ ಎಲ್ಲರೂ ಈ ತರಹದ ಮುತ್ತುಗಳನ್ನು ಧರಿಸುತ್ತಾರೆ. ಎಲ್ಲಮ್ಮನ ಪೂಜಾರಿಗಳ ಹೆಂಡಂದಿರು ಜೋಗತಿ-ಯರಾಗಬೇಕಾದಾಗ ಇಂಥ ಗರತಿ ಮುತ್ತುಗಳನ್ನು ಪಡೆಯು-ವರು. ಎಲ್ಲಮ್ಮನ ಪೂಜಾರಿಗಳು ಲಿಂಗಾಯತ ಬಣಜಿಗ ಜಾತಿಯವರಾಗಿರುತ್ತಾರೆ.

ಸೂಳೆ ಮುತ್ತುಗಳನ್ನು ಬಸವಿಯರಾಗುವವರು ಮಾತ್ರ ಧರಿಸುವರು. ಈ ಸಂಪ್ರದಾಯ ಹಿಂದುಳಿದ ಜಾತಿಯವರಲ್ಲಿ

ಮಾತ್ರ ಸಾಮಾನ್ಯವಾಗಿ ಕಂಡುಬರುತ್ತದೆ. ಜೋಗತಿ ಮುತ್ತನ್ನು ಸಾಮಾನ್ಯವಾಗಿ ಎಲ್ಲಾ ವೃದ್ಧರಾದ ಎಲ್ಲಮ್ಮನ ಭಕ್ತರು, ಪುರುಷರು, ನಪುಂಸಕರು, ವಿಧವೆಯರು ಮತ್ತು ಸೂಳೆಯರು ಧರಿಸುವರು. ಅದ್ದರಿಂದ ಕೆಲವೊಮ್ಮೆ 'ಸೂಳೆ ಮುಪ್ಪಾಗಿ ಜೋಗತಿಯಾದಳು' ಎಂಬ ನಾಣ್ನುಡಿ ಇದೆ. ಗಂಡಸರು ಜೋಗತಿತನವನ್ನು ಪ್ರವೇಶಿಸಿದರೆ ಅವರಿಗೆ ಜೋಗಪ್ಪ ಎಂದು ಕರೆಯುತ್ತಾರೆ. ಜೋಗತಿಯಾದ ನಂತರ ತಮ್ಮ ಪೋಷಾಕಿನಲ್ಲಿ ಬದಲಾವಣೆ ಮಾಡಿಕೊಳ್ಳುತ್ತಾರೆ. ಅನೇಕ ಸಂಧರ್ಭಗಳಲ್ಲಿ ಜೋಗತಿಯರು ಗಂಡಸರ ಉಡುಪಿನಲ್ಲಿಯೂ ಜೋಗಪ್ಪಗಳು ಸ್ತ್ರಿಯರ ವೇಷದಲ್ಲಿಯೂ ತಿರುಗಾಡುವದು ಕಂಡು ಬರುತ್ತದೆ. ನಪುಂಸಕರು ಸಾಮಾನ್ಯವಾಗಿ ಸ್ತ್ರೀಯರ ವೇಷಗಳನ್ನೇ ಹಾಕಿಕೊಳ್ಳುತ್ತಾರೆ. ಜೋಗತಿಯರು ತಲೆಗೂದಲುಗಳನ್ನು ಜಟಿಯಂತೆ ಬೆಳೆಸುತ್ತಾರೆ. ಇಂಥ ಜಟಿಗಳು ತಲೆಯಮೇಲೆ ಬೆಳೆದರೆ ಅವರು ಇನ್ನೂ ಭಾಗ್ಯಶಾಲಿಗಳಾದ ಜೋಗತಿಯರೆಂದು ತಿಳಿದುಕೊಳ್ಳುತ್ತಾರೆ. ಜಟಿಯು ತಲೆಯ ಮೇಲೆ ಬೆಳೆದರೆ ಎಲ್ಲಮ್ಮ ದೇವತೆಯು ತಮ್ಮನ್ನು ಜೋಗತಿಯರಾಗ ಬಯಸಿದ್ದಾಗಿ ತಿಳಿದುಕೊಳ್ಳುತ್ತಾರೆ. ಮತ್ತು ಅಂಥವರು ಸಾಮಾನ್ಯ ವರ್ಗದವರಾಗಿದ್ದರೆ ಜೋಗತಿಯರಾಗುವದೇ ಹೆಚ್ಚು. ಇಂಥಹ ಜಟಿಗೆ ಪೂಜೆಮಾಡುವರು.

ಮತ್ತೊಂದು ತರಹ ವಿಶಿಷ್ಟ ರೀತಿಯ ಜೋಗತಿಯರೆಂದರೆ :

ಮಂಗಳಾರತಿ ಜೋಗತಿಯರು, ಮಂಗಳಾರತಿ ಜೋಗತಿಯು

ಶ್ರೀ ರೇಣುಕಾದೇವಿಯು ದೇವಾಲಯದ ಪೂಜಾರಿಗಳ ನಿವಾಸ ಸ್ಥಾನದ ಹತ್ತಿರವೇ ವಾಸವಾಗಿರುತ್ತಾಳೆ. ಅವಳು ಪೂಜಾರಿಗಳ ಕಾಮ ತೃಪ್ತಿಯನ್ನು ಮಾಡುವಳಲ್ಲದೆ, ತನ್ನ ಮನಸ್ಸಿಗೆ ಬಂದರೆ ಇತರರೊಡನೆ ಸಹ ಸಂಗ ಮಾಡುವಳು, ಅವಳ ಕರ್ತವ್ಯವೆಂದರೆ ಕೇವಲ ದೇವಾಲಯದ ಮಂಗಳಾರತಿಯನ್ನು ಹಿಡಿಯುವದು, ಅದಕ್ಕೆ ಎಣ್ಣೆ ಹಾಕುವದು ಮತ್ತು ಅದನ್ನು ಸ್ವಚ್ಛವಾಗಿಡುವದು. ಅವಳು ತಾನು ಸಾಯುವವರೆಗೆ ತನ್ನ ಸೇವೆಯನ್ನು ಸಲ್ಲಿಸುತ್ತಾಳೆ. ಹಿಂದಿನ ಕಾಲದಲ್ಲಿ ಮಂಗಳಾರತಿ ಜೋಗತಿಯು ಕುಮಾರಿಯಾಗಿಯೇ ಉಳಿಯುತ್ತಿದ್ದಳೆಂದು ಮತ್ತು ಅವಳು ಸ್ವೇಚ್ಛಾಚಾರದ ಕಾಮ ಸುಖದಲ್ಲಿ ತೊಡಗುತ್ತಿರಲಿಲ್ಲವೆಂದು ತಿಳಿದು ಬರುತ್ತದೆ. ಮಂಗಳಾರತಿ ಜೋಗತಿಯು ಮಗಳಿಗೆ ಅನುವಂಶಿಕವಾಗಿ ಇಂಥ ಅಧಿಕಾರವನ್ನು ಹೊಂದುವದು ಪದ್ಧತಿಯಾಗಿರುವದಿಲ್ಲ. ಎಲ್ಲಮ್ಮನ ದೇವಸ್ಥಾನದ ಪೂಜಾರಿಗಳು ಮಂಗಳಾರತಿ ಜೋಗತಿಗೆ ಅಲ್ಲಿ ಬರುವ ಕಾಣಿಕೆಗಳಲ್ಲಿ ಕೆಲಭಾಗವನ್ನು ಕೊಡುತ್ತಾರೆ. ಇದರಿಂದ ಅವಳ ಸಂಪಾದನೆಯು ಸಹ ಸಾಕಷ್ಟು ಆಗಬಹುದಾಗಿದೆ. ಮಂಗಳಾರತಿ ಜೋಗತಿಯರು ಅಗರ್ಭ ಶ್ರೀಮಂತರಾದ ಉದಾಹರಣೆಗಳಿವೆ.

ಎಲ್ಲಮ್ಮನ ಭಕ್ತರು ಮನೆ ಮನೆಗೆ ಹೋಗಿ ಅವರದಲ್ಲಿ ಧರ್ಮ ಪ್ರಚಾರ ಮಾಡಿ ಜೀವನ ಮಾಡುವ ಜೋಗತಿಯರನ್ನು ಮೂರು ವಿಧವಾಗಿ ಸಿರಿಗಡಿಸಬಹುದು : ೧) ಕೊಡಹೊತ್ತವರು ೨) ಪಡಲಗಿ ಹೊತ್ತವರು ೩) ಜಗಹೊತ್ತವರು.

**ಕೊಡಹೊತ್ತವರು :** ತಾಮ್ರದ ಕೊಡದಲ್ಲಿ ನೀರು ತುಂಬಿ ಅದರ ಮೇಲೆ ಎಲ್ಲಮ್ಮ ದೇವತೆಯ ವಿಗ್ರಹದಿಂದ ಇಲ್ಲವೆ ಚಿತ್ರದಿಂದ ಸಿಂಗರಿಸುತ್ತಾರೆ. ಅದನ್ನು ಅವರು ಪೂಜಿಸುವರಲ್ಲದೆ ಭಿಕ್ಷೆ ಬೇಡುವ ಕಾಲಕ್ಕೆ ಅದನ್ನು ತಲೆಯ ಮೇಲೆ ಹೊತ್ತು-ಕೊಂಡು ತಿರುಗಾಡುತ್ತಾರೆ. ಅನೇಕ ಜೋಗತಿಯರು ಆ ಕೊಡವನ್ನು ಕೈಯಿಂದ ಹಿಡಿಯದೇ ತಲೆಯ ಮೇಲೆ ಇಟ್ಟು-ಕೊಂಡು ಕುಣಿಯುವ ಅಭ್ಯಾಸವನ್ನು ಕರಗತ ಮಾಡಿಕೊಂಡಿರುತ್ತಾರೆ. ಪಡಲಗಿ ಹೊತ್ತವರು ಒಂದು ದುಂಡಗಿನ ಸಣ್ಣ ಬುಟ್ಟಿಯಲ್ಲಿ ಎಲ್ಲಮ್ಮ ದೇವತೆಯ ವಿಗ್ರಹವನ್ನು ಇಟ್ಟು ತಲೆಯ ಮೇಲೆ ಹೊತ್ತುಕೊಂಡು ಭಿಕ್ಷೆ ಬೇಡುತ್ತಾರೆ. ಮತ್ತು ಅವನ್ನು ಪೂಜಿಸುತ್ತಾರೆ. ಜಗಹೊತ್ತವರು ಎಂದರೆ ದುಂಡ-ಗಿನ ದೊಡ್ಡದಾದ ಬುಟ್ಟಿಯಲ್ಲಿ ಎಲ್ಲಮ್ಮ ದೇವತೆಯ ವಿಗ್ರಹವನ್ನು ಹೊತ್ತುಕೊಂಡು ಭಿಕ್ಷೆ ಬೇಡುತ್ತಾರೆ. ಮತ್ತು ಅದನ್ನು ಪೂಜಿಸುತ್ತಾರೆ. ಆದ್ದರಿಂದ ಈ ಮೂರು ತರಹದ ಜೋಗತಿಯರು ತಮಗೆ ಅನುಕೂಲವಾದ ರೀತಿಯ ದೀಕ್ಷೆ (ಕೊಡ ಇಲ್ಲವೆ ಬುಟ್ಟಿಯನ್ನು) ಪಡೆಯುತ್ತಾರೆ. ಜೋಗತಿಯರಾಗಬಯಸುವವರು ಯಾವಾಗಲೂ ದೀಕ್ಷಾ ಸಮಾರಂಭದಿಂದಲೇ ಈ ಬಗೆಯ ಜೋಗತಿತನವನ್ನು ಪಡೆಯಬೇಕಾಗಿಲ್ಲ. ಕೆಲವೊಮ್ಮೆ ಅವರಿಗೆ ಆನುವಂಶಿಕವಾಗಿ ಜೋಗತಿಯರಾಗಲಿಕ್ಕೆ ಬರುತ್ತದೆ. ಜೋಗತಿಯರಾಗಬಯಸುವವರು ತಮ್ಮ ತಾಯಿಯಿಂದಾಗಲೀ ಇಲ್ಲವೆ ಅತ್ತೆಯಿಂದಾಗಲಿ ಅನುವಂಶಿಕವಾಗಿ ಕೊರಳಲ್ಲಿ ಧರಿಸುವ ಮುತ್ತುಗಳನ್ನು ಪಡೆದು ಜೋಗತಿಯರಾಗಬಹುದು.

ಜೋಗತಿಯರಾದವರು ಸಾಮಾಜಿಕ ಮತ್ತು ಧಾರ್ಮಿಕ ಜೀವನದಲ್ಲಿ ಕೆಲವೊಂದು ಕಟ್ಟುನಿಟ್ಟುಗಳನ್ನು ಆಚರಿಸಬೇಕಾಗುತ್ತದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ೧) ಪ್ರತಿದಿನ ಸ್ನಾನಮಾಡಿ ಶುದ್ಧರಾಗಿರುವದು; ೨) ಸಮುದಾಯದಲ್ಲಿ ಇಲ್ಲವೆ ಸಂಬಂಧಿಕರಲ್ಲಿ ಯಾರಾದರೂ ಸತ್ತಿರುವ ಸುದ್ದಿ ಕೇಳಿದಾಗ ಉಪವಾಸ ಮಾಡುವದು, ೩) ಪ್ರತಿದಿನ ಊಟಮಾಡುವ ಪೂರ್ವದಲ್ಲಿ ಎಲ್ಲಮ್ಮನ ಪೂಜೆ ಮಾಡುವದು, ೪) ಕೆಲವೊಂದು ಆಹಾರ ಪದಾರ್ಥಗಳನ್ನು ವರ್ಜನೆ ಮಾಡುವದು.

ಜೋಗತಿಯರನ್ನು ಸಾಮಾನ್ಯವಾಗಿ ಅವರು ಧರಿಸುವ ವೇಷಭೂಷಣಗಳಿಂದ ಗುರುತಿಸಬಹುದಾಗಿದೆ. ಅವು ಯಾವುವೆಂದರೆ ೧) ಕೈಯಲ್ಲಿ ಜಾಗಟೆ ಹಿಡಿದಿರುವದು, ೨) ಕೈಯಲ್ಲಿ ಕರಡಿಯ ಕೂದಲುಗಳಿಂದ ಮಾಡಿದ ಚೌರಿಯನ್ನು ಹಿಡಿದಿರುವದು; ೩) ಕೊರಳಲ್ಲಿ ಕವಡೆಗಳನ್ನು ಪೋಣಿಸಿ ಮಾಡಿದ ಸರವನ್ನು ಧರಿಸುವದು, ೪) ಕಾಲಲ್ಲಿ ತೋಡೆ ಮತ್ತು ಗೆಜ್ಜೆಯ ಸರಗಳನ್ನು ಧರಿಸುವದು; ೫) ಹಣೆಯ ಮೇಲೆ ಅರಿಷಣ ಮತ್ತು ಕುಂಕುಮ ಧರಿಸುವದು ಮತ್ತು ೬) ತಲೆಯ ಮೇಲೆ ಕೊಡ ಇಲ್ಲವೆ ಬುಟ್ಟಿ (ಹಡಲಗಿ ಅಥವಾ ಜಗ) ಹೊರುವದು.

ಜೋಗತಿಯರು ಕೊರಳಲ್ಲಿ ಕವಡೆ ಸರಗಳನ್ನು ಏಕೆ ಧರಿಸುತ್ತಾರೆಂದು ಪ್ರಶ್ನಿಸುವದುಂಟು. ಅದಕ್ಕೆ ಎರಡು ಕಾರಣಗಳನ್ನು ಕೊಡಬಹುದು. ಮೊದಲನೆಯದಾಗಿ ಕವಡೆಗಳು ಪೂರ್ವಕಾಲದಲ್ಲಿ ನಾಣ್ಯಗಳಂತೆ ಉಪಯೋಗಿಸಲ್ಪಡುತ್ತಿದ್ದವು. ಮತ್ತು ಎರಡನೆಯದಾಗಿ ಅವು ಮುತ್ತು ಮತ್ತು ಹವಳಗಳಿಗೆ ಸರಿ

ಸಮಾನವಾಗಿವೆ. ಆದ್ದರಿಂದ ಹಳೆಯ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂಡಿರುವ ಜೋಗತಿಯರು ಅವನ್ನು ಇಂದಿಗೂ ಧರಿಸುತ್ತಾರೆ. ಇಂಥ ಇನ್ನೂ ಅನೇಕ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಬಂದಿರುವದನ್ನು ನಾವು ಹಿಂದೂ ಸಮಾಜದಲ್ಲಿ ಕಾಣಬಹುದು.

## ೨. ಜನಪದ ಸಮಾಜದಲ್ಲಿ ಜೋಗತಿ ಸಂಪ್ರದಾಯ

ಜನಪದ ಧಾರ್ಮಿಕ ವೃತ್ತಿಯ (Mendicants) ಈ ಭಿಕ್ಷುಕ ಜೋಗಿಗಳಿಗೆ ಎಲ್ಲಮ್ಮನ ಜೋಗತಿಯರು ಎಂದು ಕರೆಯುವ-ದುಂಟು. ಈ ಜನರು ಧಾರ್ಮಿಕ ಭಿಕ್ಷುಕ ವೃತ್ತಿಯಲ್ಲಿ ಒಂದು ವಿಶಿಷ್ಟ ಸಂಪ್ರದಾಯವನ್ನೇ ನಡೆಯಿಸಿಕೊಂಡು ಬಂದಿದ್ದಾರೆ. ಬೆಳಗಾಂವಿ ಜಿಲ್ಲೆಯ ಪರಸಗಡ (ಸವದತ್ತಿ) ತಾಲೂಕಿನ ಎಲ್ಲಮ್ಮನ ಗುಡ್ಡದಲ್ಲಿ ಬಹುತೇಕ ಪ್ರತಿ ಹುಣ್ಣಿಮೆಗೂ (ಹೋಳಿಹುಣ್ಣಿಮೆಯನ್ನು ಹೊರತುಪಡಿಸಿ) ಜಾತ್ರೆ ನಡೆಯು-ತ್ತದೆ. ಆಗ ಎಲ್ಲಮ್ಮನ ಜೋಗತಿಯರು ಎಲ್ಲಮ್ಮನ ಭಂಡಾರ ವನ್ನು (ಅರಿಷಿಣಪುಡಿಯನ್ನು) ಜನರ ಹಣೆಗೆ ಹಚ್ಚಿ ಅದನ್ನು ಪ್ರಸಾದವೆಂದು ಕೊಡುವರು. ಒಮ್ಮೊಮ್ಮೆ ಅವರು ಹುಟ್ಟಿ ನಿಂದಲೇ ನಪುಂಸಕರಾಗದಿದ್ದರೂ ಹೆಣ್ಣಿನಂತೆ ನಟಿಸಿ ವೇಷ-

ಭೂಷಣ ಧರಿಸಿ, ಧಾರ್ಮಿಕ ಆದೇಶದ ಮೇರೆಗೆ ತಾವಾಗಿಯೇ ಅಂಥ ಒಂದು ಪರಿಸ್ಥಿತಿಯನ್ನು ಅಂದರೆ ನಪುಂಸಕತನವನ್ನು ಬರಮಾಡಿಕೊಳ್ಳುತ್ತಾರೆ. ಹೆಂಗಸು ಜೋಗತಿಯರು ಹಳದಿ ಬಣ್ಣದ ನಿಲುವಂಗಿಯನ್ನು ತೊಟ್ಟು ಗಂಡಸರಂತೆ ವರ್ತಿಸು-ತ್ತಾರೆ. ಜೋಗತಿಯರನ್ನು ಜನಪದ ಸಮಾಜದಲ್ಲಿ ಎಲ್ಲಮ್ಮನ ಸೂಳೆ ಅಥವಾ ಎಲ್ಲಮ್ಮನ ಬಸವಿ (ಎಲ್ಲಮ್ಮನ ದಾಸಿ) ಎಂದೂ ಕರೆಯುತ್ತಾರೆ.

ಎಲ್ಲಮ್ಮನನ್ನು ಕುರಿತು ಜನಪದ ಕಾವ್ಯಗಳು ಸಾಕಷ್ಟು ಇವೆ. ಇವುಗಳನ್ನು ಅವರು ಹಾಡುತ್ತ, ಕುಣಿಯುತ್ತಾ, ಚೌಡಿಕೆ ಬಾರಿಸುತ್ತಾ ಒಂಟಿಯಾಗಿ ಇಲ್ಲವೆ ಹಲವಾರು ಜೋಗತಿಯರು ಕೂಡಿಕೊಂಡು ಮನೆಮನೆಗೆ ಮತ್ತು ಬೀದಿಬೀದಿಗಳಲ್ಲಿ ಅಡ್ಡಾಡಿ ಭಿಕ್ಷೆ ಬೇಡುತ್ತಾರೆ. ಜೋಗತಿ ಸಂಪ್ರದಾಯವು ಐತಿಹಾಸಿಕ ಸತ್ಯವೆನ್ನುವ ಹಾಗೆ ಅವರ ಜನಪದ ಕಾವ್ಯಗಳಲ್ಲಿ 'ಒರಂಗಲ್ಲು (ತೋರಣಗಲ್ಲು?)' ಪ್ರತಾಪ ರುದ್ರನ ಕಥೆ ಇದೆ. ಈ ಕಥೆಯ ಪ್ರಕಾರ ಪ್ರತಾಪರುದ್ರನು ಎಲ್ಲಮ್ಮನ ಸೌಂದರ್ಯಕ್ಕೆ ಮರು-ಳಾಗಿ ತನ್ನಲ್ಲಿ ಬರಬೇಕೆಂದು ಅವಳಿಗೆ, ಹೇಳಿ ಕಳುಹಿಸುತ್ತಾನೆ. ಇದನ್ನು ಕೇಳಿ ಎಲ್ಲಮ್ಮನಿಗೆ ಅತೀವ ಸಿಟ್ಟು ಬರುತ್ತದೆ. ಅವನನ್ನು ಶಪಿಸುತ್ತಾಳೆ. ಪ್ರತಾಪರುದ್ರನು ತನ್ನ ಕಾಮು-ಕತೆಗಾಗಿ ಬಗೆಬಗೆಯ ಯಾತನೆಗಳಿಗೆ ಗುರಿಯಾಗುತ್ತಾನೆ. ಕೊನೆಗೆ ಅವನು ತನ್ನ ಪುರುಷತ್ವವನ್ನು ಕಳೆದುಕೊಂಡು ಎಲ್ಲಮ್ಮನಿಗೆ ಶರಣಾಗತನಾಗಿ ಸ್ತ್ರೀವೇಷ ಧರಿಸಿಕೊಂಡು ಜಗವನ್ನು ಹೊತ್ತುಕೊಂಡು ತಿರುಗಾಡಬೇಕಾಗುತ್ತದೆ. (ಈ ಜನಪದ

ಕಥೆಯು ಶಿವಶರಣೆಯಾದ ಅಕ್ಕಮಹಾದೇವಿಯು ಭವಿಯಾದ ಕೌಶಿಕನ ಕಾಮದೃಷ್ಟಿಗೆ ಬಿದ್ದ ಕಥೆಯನ್ನು ನೆನಪಿಗೆ ತರುತ್ತದೆ.)

**ಜನಪದ ಸಂಪ್ರದಾಯದಲ್ಲಿ ಜೋಗತಿಯಾಗಿರುವ ಬಗೆ :** ಜೋಗತಿ ಆಗ ಬೇಕಾದರೆ 'ಏಳುವರ್ಷ ವಯಸ್ಸು ಮೀರಿರಬಾರದು. ಹಲ್ಲು ಬಿದ್ದಿರಬಾರದು. ಮಡದಿ ಇದ್ದವನು ಜೋಗಪ್ಪನಾದರೆ ಅವನು ತನ್ನ ಹೆಂಡತಿಯನ್ನು ಕುರಿತು ಈ ರೀತಿ ಹೇಳುತ್ತಾನೆ :

ಚಿತ್ತಚಂಚಲವಾಗಿ
ಎತ್ತಲಾದರು ಹೋಗಿ
ಹುಲ್ಲಿದ್ದಕಡೆ ಮೇದು
ನೀರಿದ್ದಕಡೆ ಕುಡಿದು
ಒಂದು ಉತ್ತಮವಾದ ಸ್ಥಳಕ್ಕೆ ಸೇರಿ

ಬದುಕಿಕೋ ಉಧೋ ಎಕ್ಕಲ್ದೋ ಉಧೋ — ಈ ಹೇಳಿಕೆಯಲ್ಲಿ ನಾವು ಅವನು ತನ್ನ ಮಡದಿಯನ್ನು ಬಿಡುವ ಪ್ರಸಂಗವನ್ನು ಕಾಣುತ್ತೇವೆ. ತಮ್ಮ ಊರಿನಲ್ಲಿಯೇ ಜೋಗತಿ ಬಿಡಬೇಕಾದಾಗ ಊರಿನ ಎಲ್ಲಮ್ಮನ ಗುಡಿಯ ಮುಂದೆ ಶುಚಿಮಾಡಿ ಸಾರಿಸಿ ಕುಂಕುಮ, ಭಂಡಾರ, ಇದ್ದಿಲು ಪುಡಿ, ರಂಗೋಲಿ, ಹಳದಿ, ಬಿಳದಿ, ಕೆಂಪು, ಹಸಿರು ಮತ್ತು ನೀಲಿ ಈ ಒಂಬತ್ತು ಬಗೆಯ ಬಣ್ಣದ ಪುಡಿಗಳಲ್ಲಿ ಒಂದೊಂದನ್ನು ಐದೈದು ಸೇರಿನಂತೆ ಸಂಗ್ರಹಿಸಿ ಸಾರಿಸಿದ ನೆಲದ ಮೇಲೆ "ಜೋಗ್ತಿ ಪಟ್ಟದ ಚಿತ್ರವನ್ನು ಬರೆಯುತ್ತಾರೆ. ಅದರ

ನಾಲ್ಕು ಮೂಲೆಗಳಿಗೂ ಹೊಂಬಾಳೆ, ವೀಳೆಯದೆಲೆ, ಅಂಗ ನೂಲು, ಅಕ್ಷತೆ. ಗಂಧಗಳಿಂದ ಅಲಂಕರಿಸಿದ ಕಳಸವನ್ನಿಡಲಾಗುವದು. ಎಲ್ಲ ಕಳಸಗಳಿಗೂ ಒಂದು ವಿಭೂತಿ ಪಟ್ಟಿ. ಒಂದು ಬೆಲ್ಲದ ಕಣ್ಣೆ, ಒಂದು ಚಿಪ್ಪು, ಬಾಳೆ ಹಣ್ಣು, ಎಲೆ, ಅಡಿಕೆ ಮತ್ತು ಬೇರೆ ಬೇರೆ ತರದ ಯಾವದೇ ಐದೈದು ಹಣ್ಣುಗಳನ್ನಿಡುತ್ತಾರೆ. ನಾಲ್ಕು ಕಳಸಗಳನ್ನು ಬಳಸಿ ಬರುವಂತೆ ಮೂರೆಳೆ ಹಸಿ ನೂಲನ್ನು ಬಿಡುತ್ತಾರೆ. ಪಟ್ಟದ ನಡುವೆ ಜೋಗತಿಯಾಗಲಿರುವ ಹೆಣ್ಣುಮಗಳನ್ನು ಕುಳ್ಳಿರಿಸಿ ನಾಲ್ಕು ಕಳಸಗಳ ಕುತ್ತಿಗೆಯಿಂದಲೂ ಒಂದೊಂದೆಳೆ ಹಸಿನೂಲನ್ನು ಎಳೆದುಕೊಂಡು ಅದನ್ನು ಅವಳ ಕುತ್ತಿಗೆಗೆ ಕಟ್ಟುತ್ತಾರೆ. ಅನಂತರ ಎಲ್ಲಮ್ಮನ ವಂಶಜನೆಂದು ಹೇಳುವ ಕ್ಷತ್ರಿಯ ಕುಲದ ಸ್ಥಾನಿಕನು (ತಾನಿಕನು) ದರ್ಶನ ಮಣಿ ಇಲ್ಲವೆ ಮುತ್ತು ಎಂದು ಹೇಳುವ ೨,೫ ಇಲ್ಲವೇ ೯ ಹಾಲು ಮಣಿಗಳನ್ನು ಪೋಣಿಸಿದ ದಾರವನ್ನು ಗುಡಿಯಲ್ಲಿರುವ ಎಲ್ಲಮ್ಮನ ಕೈಗೆ ಒಂದು ತುದಿಯನ್ನು ಜೋಗತಿಯಾಗುವವಳ ಕುತ್ತಿಗೆಗೆ ಮತ್ತೊಂದು ತುದಿಯನ್ನು ಕಟ್ಟುತ್ತಾನೆ. ಈಗ ಎಲ್ಲಮ್ಮ ದೇವಿಯನ್ನು ಚೌಡಿಕೆಯ ದನಿಯೊಡನೆ ಧೂಪ ದೀಪಗಳಿಂದ ಬಗೆಬಗೆಯಾಗಿ ಅರ್ಚಿಸುವ ತಾನಿಕನು ಎಲ್ಲಮ್ಮನ ಕೈಗೆ ಕಟ್ಟಿರುವ ದಾರದ ತುದಿಯಿಂದ ದರ್ಶನ ಮಣಿಗಳನ್ನು ಜೋಗತಿಯ ಕುತ್ತಿಗೆಯವರೆಗೆ ಸರಿಸಿಕೊಂಡು ಬಂದು ಉಧೋ ಎಲ್ಲಮ್ಮ ಉಧೋ ಜಯಾ, ಎಂದು ಹೇಳಿ ಮುತ್ತುಗಳನ್ನು ಕುತ್ತಿಗೆಗೆ ಕಟ್ಟುತ್ತಾನೆ. ನಂತರ ತಾನಿಕನು ಹೊಸ ಜೋಗತಿಗೆ ಪರಂಪರೆ

ಯಿಂದ ಬಂದ ಕೆಲವು ಸಿದ್ಧ ಪ್ರಶ್ನೆಗಳನ್ನು ಕೇಳಿ ಸಿದ್ಧ ಉತ್ತರಗಳನ್ನು ಪಡೆಯುತ್ತಾನೆ.

ಯಾರಾದರೂ ಗಂಡ ಹೆಂಡಂದಿರು ಜೊತೆಯಲ್ಲಿ ಮಲಗಿರುವದನ್ನು ಕಂಡರೆ ಜೋಗತಿ ಅದನ್ನು ಬೇರೆಯವರ ಜೊತೆ ಹೇಳಕೂಡದು. ಕಟ್ಟಿದ ಕರು ಕಿತ್ತುಕೊಂಡು ಹಸುವಿನ ಮೊಲೆ ಉಣ್ಣುತ್ತಿದ್ದರೆ ಅದನ್ನು ಬಿಡಿಸಬಾರದು. ಹೊಲ ಮೇಯುವ ಹಸುವನ್ನು ಓಡಿಸಬಾರದು. ಸುಳ್ಳು ಹೇಳಬಾರದು. ನಿಸ್ಸಾಹಾಯಕ ಜನರಿಗೆ ಸಹಾಯ ಮಾಡಬೇಕು. ಸೇಡು ತೀರಿಸಿಕೊಳ್ಳಬಾರದು. ಎಂಜಲನ್ನು ಊಟ ಮಾಡಬಾರದು. ಇಷ್ಟೆಲ್ಲ ಉಪದೇಶಿಸಿದ ಮೇಲೆ ತಾನಿಕನು 'ಉಧೋ ಎಲ್ಲಮ್ಮ ಉಧೋ ಜಯ, ಎಕ್ಕಲ್ದೋ ಉಧೋ ಜೋಗಲ್ದೊ ಉಧೋ' ಎಂದು ಹೇಳಿ ಜೋಗತಿಯ ತಲೆಯ ಮೇಲೆ ಎಲ್ಲಮ್ಮನ ಜಗ ಹೊರಿಸುತ್ತಾನೆ. ಜೋಗಪ್ಪಗಳಿಗೆ ಕೈಗೆ ಚೌಡಿಕೆ ಕೊಡುತ್ತಾನೆ. ಇಲ್ಲಿ ನಾವು ಜೋಗತಿಯರು ಏಕನಾಥ ಮತ್ತು ಜೋಗಿನಾಥರನ್ನು ಸ್ಮರಿಸುವದನ್ನು ಕಾಣಬಹುದು.

ಇದಾದ ನಂತರ ಊರ ಜನರು ಹೊಸ ಜೋಗತಿಯನ್ನು ಭಕ್ತಿಯಿಂದ ಬರಮಾಡಿಕೊಳ್ಳುತ್ತಾರೆ. ಅವರಲ್ಲಿ ಅನೇಕರು ಮೊರದಲ್ಲಿ ಅಕ್ಕಿ, ಅರಿಷಿಣ, ಕುಂಕುಮ, ಊದಿನಕಡ್ಡಿ, ಎಲೆ-ಯಡಿಕೆ, ಒಂದಷ್ಟು ದುಡ್ಡು, ಮುಂತಾದವುಗಳನ್ನು ಇಟ್ಟು ಕೊಂಡು ಬಂದು ಜಗಕ್ಕೆ ಇಲ್ಲವೇ ಚೌಡಿಕೆಗೆ ಭಯ ಭಕ್ತಿಯಿಂದ ಪೂಜೆಮಾಡಿ ಜೋಗತಿಯ ಪಾದಕ್ಕೆ ನಮಸ್ಕಾರಮಾಡಿ ಕಣ್ಣೆ

ಗೊತ್ತಿಕೊಂಡು ಭೀಕ್ಷೆ ನೀಡುತ್ತಾರೆ. ಜೋಗತಿಯಾದವರು ಅವರಿಂದ ಭೀಕ್ಷೆ ಪಡೆದು ಅವರ ಹಣೆಗೆ ಎಲ್ಲಮ್ಮನ ಭಂಡಾರವನ್ನು ಹಚ್ಚಿ ಮುಂದೆ ಸಾಗುತ್ತಾರೆ. ಈ ಪ್ರಕಾರವಾಗಿ ೩ ಅಥವಾ ೫ ಅಥವಾ ೯ ಮನೆಗಳಲ್ಲಿ ಉಪಾದನ ಮಾಡಿಸುತ್ತಾರೆ. ಭಿಕ್ಷೆಯಿಂದ ಬಂದ ಅಕ್ಕಿಯಲ್ಲಿ ಬೆಲ್ಲದನ್ನವನ್ನು ಮತ್ತು ಉಗ್ಗಿದನ್ನವನ್ನು (ಅರಿಷಿಣದ ಅನ್ನ) ಮಾಡಿ ಎಲ್ಲಮ್ಮನಿಗೆ ತಳಿಗೆ ಎರೆಯುತ್ತಾರೆ. ಈ ಪ್ರಸಾದವನ್ನು ಎಲ್ಲರೂ ಭಕ್ತಿಯಿಂದ ಕಣ್ಣಿಗೆ ಒತ್ತಿಕೊಂಡು ಸೇವಿಸುತ್ತಾರೆ. ಈ ರೀತಿಯಾಗಿ ತಮ್ಮ ತಮ್ಮ ಊರುಗಳಲ್ಲಿ ಜೋಗತಿಯರನ್ನು ಬಿಡುತ್ತಾರೆ, ಇಷ್ಟೆಲ್ಲ ವೆಚ್ಚವನ್ನು ಮಾಡಲಿಕ್ಕೆ ಅಗದವರು ಸವದತ್ತಿಯ ಎಲ್ಲಮ್ಮನ ಗುಡ್ಡಕ್ಕೆ ಇಲ್ಲವೇ ಚಿತ್ರದುರ್ಗ ಜಿಲ್ಲೆಯ ಚಂದ್ರಗುತ್ತಿಯ ಎಲ್ಲಮ್ಮನ ಗುಡಿಗೆ ಹೋಗಿ ಜೋಗತಿಯರನ್ನು ಎಲ್ಲಮ್ಮನಿಗೆ ಲಗ್ನ ಮಾಡಿಸುತ್ತಾರೆ. ಹೀಗೆ ವಿಧಿವತ್ತಾಗಿ ಚೌಡಿಕೆ ಹಿಡಿದವರು ಜೋಗತಿಯಾಗುತ್ತಾತೆಯೇ ಹೊರತು ಚೌಡಿಕೆ ಹಿಡಿದವತೆಲ್ಲರೂ ಜೋಗತಿಯರೆಂದು ತಿಳಿದುಕೊಳ್ಳಬಾರದು. ನಿಜವಾಗಿ ನೋಡಿದರೆ ನೂರಾರು ಜನ ಚೌಡಿಕೆಯರಿರುವ ಊರಿಗೆ ನಿಜವಾದ ಜೋಗತಿಯರು ಒಬ್ಬಿಬ್ಬರು ಮಾತ್ರ ಆಗಿರುತ್ತಾರೆ. ಇವರಿಗೆ ಜನಪದ ಸಮಾಜದಲ್ಲಿ ಮರ್ಯಾದೆಯು ಇರುವದನ್ನು ನಾವು ಕಾಣಬಹುದು.

ಜೋಗತಿಯಾದ ಹೆಂಗಸು ಎಲ್ಲಮ್ಮನ ಸತಿಯಾಗಿದ್ದರಿಂದ ಇತರರಂತೆ ಅವಳು ಶಾಸ್ತ್ರೀಯವಾಗಿ ಮದುವೆಯಾಗುವಂತಿಲ್ಲ.

ಆದರೆ ಅವಳು ತಾನು ಬಯಸಿದ ಉಪಚಾರದ ಗಂಡನೊಡನೆ ಕೂಡುವ ದಿನದಲ್ಲಿ 'ಹೆಚ್ಚಳಿ' ಮಾಡುತ್ತಾರೆ. ಈ ಶೋಭನದ ಕಾರ್ಯ ಎಲ್ಲಮ್ಮನ ಪೂಜೆಯ ಪವಿತ್ರಕಾರ್ಯದಷ್ಟೆ ಮಹತ್ವಪೂರ್ಣವಾದುದೆಂದು ಭಾವನೆ, (ಜೋಗತಿಯ ತಲೆಯ ಮೇಲೆ ನೀಳ್ಗೂದಲು ಜಡೆಗಟ್ಟಿಕೊಂಡರೆ ಅವಳನ್ನು ಸಾಕ್ಷಾತ್ ಎಲ್ಲಮ್ಮನೆಂದು ಭಾವಿಸಲಾಗುವದು. ಆದರೆ ವಿಜ್ಞಾನಿಗಳ ಅರ್ಥದಲ್ಲಿ ಅದೊಂದು ದೈಹಿಕ ಪ್ರಕ್ರಿಯೆ.

ಜೋಗತಿಯರು ನಿಧನರಾದರೆ ಅವರ ಹೆಣವನ್ನು ಮಡಿ ಮಾಡಿ ಒಂಭತ್ತು ಬಣ್ಣಗಳ ಪುಡಿಗಳ ರಂಗವಲ್ಲಿಯ ಮೇಲೆ ಪೂರ್ವಕ್ಕೆ ಮುಖಮಾಡಿ ಕೂಡಿಸುತ್ತಾರೆ. ನಾಲ್ಕು ಕಳಸಗಳಿಂದ ಬೆಳಗುತ್ತಾರೆ. ಹೆಣದ ಕುತ್ತಿಗೆಯಲ್ಲಿರುವ ದರ್ಶನ ಮಣಿ ಹಾರವನ್ನು ನಾಲ್ಕು ಕಳಸಗಳಿಂದ ಎಳೆದುಕೊಂಡಿದ್ದ ನಾಲ್ಕು ದಾರಗಳನ್ನು ಕೀಳಿಸುತ್ತಾರೆ. ಹೀಗೆ ಕಿತ್ತೆಸೆಯುವದರಿಂದ ಜೋಗತಿಯನ್ನು ಪ್ರಾಣದೇವರ ಸೆರಗಿನಿಂದ ಬಿಡಿಸಿಕೊಂಡಂತಾಯಿತೆಂದು ನಂಬುತ್ತಾರೆ. ಈಗ ಜೋಗತಿಯ ಪ್ರಾಣ ಎಲ್ಲಮ್ಮನ ಸತಿಯಾಗಿರದೆ ಮಾನವ ಪ್ರಾಣವಾಗುತ್ತದೆ. ಹೀಗೆ ಮಾಡದೆ ಹೋದಲ್ಲಿ ಅವರು ಅಂತರ್ ಪಿಶಾಚಿಯಾಗುತ್ತಾರೆಂದು ತಿಳಿದುಕೊಳ್ಳುತ್ತಾರೆ. ಸೆರಗಿನಿಂದ ಬಿಡುಗಡೆಯಾಗಿ ಹೆಣವನ್ನು ಪಟ್ಟದಿಂದ ಇಳಿಸಿದ ನಂತರ ಅದನ್ನು ದಹನ ಮಾಡಬಹುದು ಇಲ್ಲವೆ ವಪನ ಮಾಡಬಹುದು.

ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ಹುಟ್ಟಿಕೊಂಡಿರುವ

ಎಲ್ಲಮ್ಮನ ಜೋಗತಿಯರ ಅಂಕಿ ಸಂಖ್ಯೆಗಳು ಇನ್ನೂ ಗೊತ್ತಾಗಿಲ್ಲ. ಇವರ ಬಗ್ಗೆ ಸಾಕಷ್ಟು ಸಂಶೋಧನೆ ಆಗಿಲ್ಲ ವಾದ್ದರಿಂದ ಎಲ್ಲಮ್ಮನ ಜೋಗತಿಯರ ಮತ್ತು ಜೋಗಪ್ಪಗಳ ಲೈಂಗಿಕ ಜೀವನದ ಬಗ್ಗೆ ಸಾಕಷ್ಟು ಪುರಾವೆಗಳ ಆಧಾರವಿಲ್ಲದ್ದ ರಿಂದ ಅದೊಂದು ಒಡೆಯಲಾರದ ಒಗಟೇ ಆಗಿದೆ. ಆದರಲ್ಲಿ ಎಷ್ಟೋ ಜನರು ನಪುಂಸಕರು ಮತ್ತು ಉಭಯ ಲಿಂಗಿ ಗಳು ಇದ್ದಂತೆ ತೋರುತ್ತದೆ.

ಜೋಗತಿಯರು ಮತ್ತು ಜೋಗಪ್ಪಗಳು ಅರಿಷಿಣ ಪುಡಿ ಯನ್ನು ಭಂಡಾರವೆಂದು ಹೇಳಿ ಜನರ ಹಣೆಗೆ ಹಚ್ಚಿ ಭಿಕ್ಷೆ ಬೇಡುತ್ತಾರೆ, ಈ ಭಂಡಾರಕ್ಕೆ ಧಾರ್ಮಿಕರಿಗೆ ಕುಂಕುಮ, ಕರಿಯ ತಿಲಕ, ವಿಭೂತಿ ಅಥವಾ ಭಸ್ಮ ಮತ್ತು ಗಂಧಗಳಿಗೆ ಇರುವ ಧಾರ್ಮಿಕ ಮಹತ್ವವೇ ಇದೆ. ಈ ಅರಿಷಿಣ ಪುಡಿಗೆ ಭಂಡಾರ ಎಂದು ಏಕೆ ಕರೆಯುತ್ತಾರೆ ಎಂಬುದಕ್ಕೆ ಉತ್ತರವಾಗಿ ನಾವು ದಸರಾ ಹಬ್ಬದಲ್ಲಿ ಬನ್ನಿ ಎಲೆಯನ್ನು ಕೊಟ್ಟು ಅದಕ್ಕೆ 'ಬಂಗಾರ' ಎಂದು ಹೇಳುವದನ್ನು ನೆನೆಯಬಹುದು. ಈ ಅರಿಷಿಣಪುಡಿಗೆ ಹಣದ ಸಂಗ್ರಹಕ್ಕಿರುವ ಭಂಡಾರದ ಹೆಸರನ್ನು ಕೊಡಲಾಗಿದೆ.

# ೩. ಜೋಗತಿ ಸಂಪ್ರದಾಯದ ಅರ್ಥ ವಿವರಣೆ

ಜೋಗತಿ ಎಂಬ ಪದದ ಹುಟ್ಟು ಸಂಸ್ಕೃತದ 'ಯೋಗಿ' ಎಂಬ ಶಬ್ದದಿಂದ ಉತ್ಪನ್ನವಾಗಿದೆ. ಯೋಗಿ ಎಂಬ ಶಬ್ದದ ಸ್ತ್ರೀ ಲಿಂಗವೇ ಯೋಗಿಣಿ ಎಂದಾಗುವದು. ಇದು ಕನ್ನಡದಲ್ಲಿ ಬಳಕೆ ಯಾದಾಗ ಜೋಗತಿ ಎಂದಾಯಿತು. ಆದರೆ ಜನಸಾಮಾನ್ಯರು ಈ ಶಬ್ದವನ್ನು ಜೋಗಿತಿ ಎಂದು ಪ್ರಯೋಗಿಸುವುದು ಉಂಟು. ಇಲ್ಲವೆ ಜೋಗವ್ವ ಎಂದು ಕರೆಯುತ್ತಾರೆ. ಇಂಥ ಪದ್ಧತಿಯನ್ನು ಆಚರಿಸುವ ಗಂಡಸರಿಗೆ ಜೋಗಪ್ಪ ಎಂದು ಕರೆಯುತ್ತಾರೆ.

ಸವದತ್ತಿ ಹತ್ತಿರವಿರುವ ಎಲ್ಲಮ್ಮನ ದೇವಾಲಯಕ್ಕೆ ರೇಣುಕಾ ಎಲ್ಲಮ್ಮ ದೇವಸ್ಥಾನವೆಂದು ಕರೆಯುವದುಂಟು. 'ರೇಣುಕಾ' ಎಂಬ ಹೆಸರು ಸಂಸ್ಕೃತ ಮೂಲಕ್ಕೆ ಸೇರಿದ ಶಬ್ದ. 'ಎಲ್ಲಮ್ಮ' ಅಂದರೆ ಕನ್ನಡ ಪದ ಇವೆರಡು ಪದಗಳು ಒಂದೇ ದೇವತೆಯ ಹೆಸರೂಗಳೂ ಆಗಿದ್ದರೂ ಎರಡೂ ಶಬ್ದಗಳನ್ನು ಏಕಕಾಲಕ್ಕೆ ಅದೇ ದೇವತೆಗೆ ಕರೆಯುವ ರೂಢಿಯಾಗಿದೆ. ಋಗ್ವೇದದಲ್ಲಿ ಅಧಿತಿ ದೇವತೆಯ ಬಗ್ಗೆ ಹೇಳಲಾಗಿದೆ. ಈ ದೇವತೆಯು ಅಲ್ಲಿ ಅನಂತಮಯಳಾದವಳು. ಜಗತ್ತನ್ನು ಮತ್ತು ದೇವತೆಗಳನ್ನು ಹುಟ್ಟಿಸಿದವಳು; ಎಂದೂ ಹೇಳಲಾಗಿದೆ. ಎಲ್ಲಮ್ಮನಿಗೆ ಉಪಯೋಗಿಸುವ 'ಏಕವೀರ' ಎಂಬ ಶಬ್ದವು ಇದೇ ಅರ್ಥವನ್ನು ಕೊಡುತ್ತದೆ. ಏಕೆಂದರೆ 'ಎಲ್ಲಮ್ಮ'

ಎಂಬುದರ ಅರ್ಥವು 'ಎಲ್ಲವೂ' 'ಸರ್ವವೂ' 'ಅನಂತವೂ'- ಅಧಿತೆಯೂ ಏಕವೂ ಅಥವಾ ಒಂದೇ ಎಂದು ಆಗಿದೆ. ಆದ್ದರಿಂದ ರೇಣುಕಾ ಎಲ್ಲಮ್ಮ ಅಂದರೆ ಅನಂತ ಸ್ವರೂಪಿಯಾದ ರೇಣುಕಾದೇವಿ. ಅವಳಿಗೆ ಅಧಿತಿ, ಏಕವೀರ ಅಥವಾ ಕನ್ನಡದಲ್ಲಿ ಎಲ್ಲಮ್ಮ ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿದ್ದರೂ, ಅವೆಲ್ಲವುಗಳ ಅರ್ಥವು ಒಂದೇ ಆಗಿದೆ. ಇದೇ ರೀತಿಯಾಗಿ ಮಲಪಹಾರಿ ನದಿಯ ಹೆಸರು ಸಹಿತ ಒಂದೇ ಶಬ್ದವು. ಎರಡು ಅರ್ಥಗಳನ್ನು ಕೊಡುತ್ತದೆ. ಮಲೆ ಎಂದರೆ ಗುಡ್ಡವೆಂದೇ ಅರ್ಥ. ಪಹಾರೀ ಎಂದರೂ ಗುಡ್ಡವೆಂದೇ ಅರ್ಥ. ಆದರೆ ಇವೆರಡು ಶಬ್ದಗಳು ಬೇರೆ ಬೇರೆ ಭಾಷಾ ಕುಟುಂಬಗಳಿಗೆ ಸೇರಿದ ಶಬ್ದಗಳು. ಮಲೆಯೆಂಬ ಶಬ್ದವು ದ್ರಾವಿಡ ಭಾಷೆಗಳ ಗುಂಪಿಗೆ ಸೇರಿದ್ದರೆ, ಪಹಾರಿ ಎಂಬುದು ಆರ್ಯ ಭಾಷಾ ಕುಟುಂಬಕ್ಕೆ ಸೇರಿದ ಶಬ್ದ. ಆದ್ದರಿಂದ ಇಲ್ಲಿ ನಾವು ದ್ರಾವಿಡ ಮತ್ತು ಆರ್ಯ ಭಾಷೆಯ ಶಬ್ದಗಳೆರಡನ್ನೂ ಒಂದೇ ನದಿಗೆ ಉಪಯೋಗಿಸಿರುವದನ್ನು ಕಾಣುತ್ತೇವೆ. ಒಂದು ಗುಡ್ಡಗಾಡಿನ ಜನಾಂಗದ ಹೆಸರು ಮಲಪಹಾರೀ ಎಂದು ಇದೆ. ಅವರು ಬಂಗಾಳದಲ್ಲಿಯೂ ಕಂಡು ಬರುತ್ತಾರೆ. ನಾವು ಇಂದು ಈ ಶಬ್ದವನ್ನು ಸಂಸ್ಕೃತ ಜನ್ಯವೆಂದು ತೋರಿಸಲಿಕ್ಕೆ ಹೋಗಿ ಮಲಪ್ರಭೆ ಎಂದು ಕರೆಯುತ್ತೇವೆ.

ಜೋಗತಿಯರಾಗುವವರು ಸ್ತ್ರೀಯರಿರಲಿ, ಪುರುಷರಿರಲಿ, ಎಲ್ಲಮ್ಮನೊಡನೆ ಏಕೆ ಮದುವೆಯಾಗುತ್ತಾರೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಜಗತ್ತಿನ ಮೂಲಶಕ್ತಿ ಪುರುಷನಿಗೆ ಸಹಿತ

ಜನ್ಮ ಕೊಟ್ಟವರು ಆ ಜಗನ್ಮಾತೆ ಎಲ್ಲಮ್ಮ. ಅವಳು ಸ್ತ್ರೀ ಮತ್ತು ಪುರುಷ ಶಕ್ತಿಗಳ ಸಮ್ಮಿಲನ ಅವಳು ಸ್ತ್ರೀಯೂ ಹೌದು ಪುರುಷನೂ ಹೌದು. ಆದ್ದರಿಂದ ಜೋಗತಿಯಾಗುವವರು ಆಶಕ್ತಿಯೊಡನೆ ಮದುವೆ ಯಾಗಿ ದೇವರಿಗೆ ಅರ್ಪಿತವಾಗು ತ್ತಾರೆ.

ಜೋಗತಿಯಾಗುವವರಿಗೆ ಮತ್ತು ಎಲ್ಲಮ್ಮನ ಭಕ್ತರಲ್ಲಿ ಜಾತಿಭೇದವಿಲ್ಲ– ಮತ್ತು ಲಿಂಗ ಬೇಧವಿಲ್ಲ. ಎಲ್ಲ ಹಿಂದೂಜಾತಿ ಯವರು ಬಡವರು – ಮತ್ತು ಬಲ್ಲಿದರು ಬೇರೆ ಭಕ್ತಿ, ಭಾಷಾ ವರ್ಗಗಳಿಗೆ ಸೇರಿದವರು, ಬೇರೆ ಮತ ಪಂಥಗಳಿಗೆ ಸೇರಿದವರು ಎಲ್ಲಮ್ಮನನ್ನು ಪೂಜಿಸುತ್ತಾರೆ. ಶೈವ, ವೈಷ್ಣವ, ಶಕ್ತಿ ಮತ್ತು ಗಣಪತಿಯ ಸಂಪ್ರದಾಯಗಳ ಸಮೂಹವನ್ನು ನಾವು ಎಲ್ಲಮ್ಮನ ಗುಡ್ಡದಲ್ಲಿ ಈ ಭಕ್ತಿ ಸಂಪ್ರದಾಯದಲ್ಲಿ ಕಾಣುತ್ತೇವೆ.

ಏಕನಾಥ ಜೋಗಿನಾಥ, ಗೋರಕನಾಥ, ಎಂಬ ಈ ನಾಥ ಸಂಪ್ರದಾಯವು ಶೈವ ಸಂಪ್ರದಾಯದಲ್ಲಿ ಮಹತ್ವವಾದ ಸ್ಥಾನ ವನ್ನು ಪಡೆದುಕೊಂಡಿದೆ. ಗೋರಕನಾಥ ಸಂಪ್ರದಾಯಕ್ಕೆ ಇಲ್ಲಿ ಬಹಳ ಮಹತ್ವವಿರುವದನ್ನು ಮತ್ತು ಎಲ್ಲಮ್ಮನ ಪತಿ ಯಾದ ಜಮದಗ್ನಿಯು ಕಾಮಧೇನುವಾದ– ಗೋರಕ್ಷಣೆಯಲ್ಲಿ ಕಾರ್ತವೀರನ ಕೈಯಲ್ಲಿ ಪ್ರಾಣಬಿಡಬೇಕಾದ ಸಂದರ್ಭ ಮತ್ತು ಜೋಗತಿಯರು ಆಕಳು ಕರುಗಳಿಗೆ ಕೊಡುವ ಮಹತ್ವ. ಇವುಗಳ ವೈಚಾರಿಕ ಮತ್ತು ಪೌರಾಣಿಕ ಹಿನ್ನೆಲೆಗಳು ಗಮ ನಾರ್ಹವಾಗಿದೆ. ಜಮದಗ್ನಿಯು ಗೋರಕ್ಷಕನಂತೆ ತೋರಿದರೆ

ಅವನ ಹೆಂಡತಿ ಎಲ್ಲಮ್ಮ ಏಕನಾಥ ಜೋಗಿನಾಥರೆಂಬ ಶೈವ ಋಷಿಗಳಿಂದ ರಕ್ಷಣೆ ಪಡೆದವಳು. ಆದರೆ ಅವರ ಮಗನಾದ ಪರಶುರಾಮನು ವಿಷ್ಣುವಿನ ಆರನೆಯ ಅವತಾರವೆಂದು ಹಿಂದೂಜನರ ನಂಬುಗೆಯಾಗಿದೆ. ಆದರೆ ಮುಂದೆ ಎಲ್ಲಮ್ಮನು ಧೇವತೆಗಳಲ್ಲಿ ಕಂಡುಬರುವ ಅಧಿತಿಯೂ ಆಗಿದ್ದಾಳೆ. ಅವಳು ಜನ ಸಾಮಾನ್ಯರಿಗೆ 'ಏಕಮಾಯಾ' ಎಂದು ಎಲ್ಲಮ್ಮ ಎಂದೂ ಶಕ್ತಿ ಆರಾಧಕರ ಸಂಪ್ರದಾಯಕ್ಕೆ ಸೇರಿಸಲ್ಪಟ್ಟಿರು ವಳು. ಆದ್ದರಿಂದ ಎಲ್ಲಮ್ಮನ ಗುಡ್ಡದಲ್ಲಿ ಎಲ್ಲ ಸಂಪ್ರದಾಯ ಗಳಿಗೆ ಸೇರಿದ ಮತ ಪಂಥಗಳನ್ನು ಕಾಣುತ್ತೇವೆ. ಮಾತಂಗಿ ಎಂಬ ಹರಿಜನ ಜಾತಿಯ ದೇವತೆಯು ಇಲ್ಲಿರುವದರಿಂದ ಉಚ್ಚ ಮತ್ತು ನೀಚ ಜಾತಿಗಳನ್ನು ಸಾಮಾಜಿಕವಾಗಿ ಒಂದೆಡೆ ತರಲಾಗಿದೆ.

ರೇಣುಕಾದೇವಿಯ ಪೌರಾಣಿಕ ಕಥೆಯು ಮತ್ತು ಪಂಥದ ಬಗ್ಗೆ ಕಾಲ ನಿರ್ಧಾರ ಮಾಡಲಿಕ್ಕೆ ನಮಗೆ ಅನೇಕ ಪುರಾಣಗಳ ಹಾಗೂ ಐತಿಹಾಸಿಕ ಹಿನ್ನೆಲೆಗಳು ಆಧಾರವಾಗಿವೆ. ಪುರಾಣ ಗಳಲ್ಲಿ ಪರಶುರಾಮನು ಕ್ಷತ್ರಿಯ ವೀರರನ್ನು ನಾಶ ಮಾಡಿದ ಕಥೆ ಬರುತ್ತದೆ. ಆಗ ದಶರಥ ಮಹಾರಾಜನು ಮದುವೆ ಮಾಡಿಕೊಳ್ಳುತ್ತಿದ್ದನೆಂದೂ ಜನಕರಾಜನು ಯಜ್ಞದಲ್ಲಿ ತೊಡ ಗಿದ್ದನೆಂದೂ ಹೇಳಲಾಗಿದೆ. ಇದರ ಮೇಲಿಂದ ರೇಣುಕೆಯು ಮತ್ತು ಅವರ ಪಂಥವು ನಿಸ್ಸಂದೇಹವಾಗಿ ರಾಮಾಯಣಕ್ಕಿಂತ ಪೂರ್ವವಾದುದೆಂದು ನಿರ್ಧರಿಸಬಹುದು. ಸಂಪ್ರದಾಯದಲ್ಲಿ ಪರಶುರಾಮನು ಶ್ರೀರಾಮಚಂದ್ರನಿಗಿಂತಲೂ ಮೊದಲಿನವ.

ಅವನು ಶ್ರೀ ವಿಷ್ಣುವಿನ ಅವತಾರವೆಂಬ ಕಲ್ಪನೆಯು ಕಾಲ ನಿರ್ಧಾರವನ್ನೆ ಇನ್ನೂ ನಿಶ್ಚಿತಗೊಳಿಸುತ್ತದೆ. ಆದ್ದರಿಂದ ಪರಶುರಾಮನು ಶ್ರೀರಾಮನಿಗಿಂತ ಒಂದು ತಲೆಮಾರು ಹಳೆಯವನೆಂದೂ ಮತ್ತು ರೇಣುಕೆಯು ಎರಡು ತಲೆಮಾರು ಹಿಂದಿನವಳೆಂದೂ ನಿಶ್ಚಿತವಾಗಿ ಗೊತ್ತಾಗುತ್ತದೆ. ಇತ್ತೀಚಿನ ಪ್ರಾಚ್ಯಶಾಸ್ತ್ರದಲ್ಲಿಯ ಪ್ರಕಾರ ಮಹಾಭಾರತದ ಕಾಲ ಕ್ರಿ. ಶ. ಪೂ. ೮೦೦ ಎಂದು ರಾಮಾಯಣದ ಕಾಲ ಕ್ರಿ. ಶ. ಪು. ೧,೦೦೦ ಎಂದು ಗೊತ್ತಾಗಿದ್ದರೆ ಶ್ರೀ ರೇಣುಕೆಯ ಕಾಲ ಸುಮಾರು ಕ್ರಿ. ಶ. ಪೂ. ೧೧೦೦ ಎಂದು ಹೇಳಬಹುದು. ಪರಶುರಾಮನ ಪಂಥವು ರಾಮಾಯಣದಲ್ಲಿ ಮತ್ತು ಮಹಾಭಾರತದಲ್ಲಿಯೂ ಸಾಕಷ್ಟು ಉಲ್ಲೇಖಿಸಲ್ಪಟ್ಟಿದೆ.

ಎಲಮ್ಮನ ಧಾರ್ಮಿಕ ಪಂಥದಲ್ಲಿ ಅನೇಕ ಸಂಕೇತಿಕದ ಆಚರಣೆಗಳನ್ನು ಕಾಣುತ್ತೇವೆ. ಜೋಗತಿಯರು ಹೊರುವ ಬುಟ್ಟಿಗೆ ಜಗವೆಂದು ಕರೆಯುತ್ತಾರೆ. ಆ ಬುಟ್ಟಿಯು ಇಡಿ ಜಗತ್ತಿನ ಸಂಕೇತವಾಗಿಡೆ. ಅದರಲ್ಲಿ ಶ್ರೀ ರೇಣುಕೆಯು ಆಶೀನಳಾಗಿದ್ದಾಳೆ. ಜೋಗತಿಯರ ಭಂಡಾರವು ಸಂಪತ್ತಿನ ಸಂಕೇತವಾಗಿದೆ. ಜೋಗತಿಯರ ಹಾಡು ಮತ್ತು ಕುಣಿತಗಳು ಎಲ್ಲಮ್ಮನೊಂದಿಗೆ ಅವರು ನಲಿದಾಡಿದ ಸಂಕೇತಗಳಾಗಿದೆ. ಜೋಗತಿಯರು ಹಾಗೂ ಎಲ್ಲಮ್ಮನ ಭಕ್ತರು ಅನೇಕ ವಿಧಗಳಲ್ಲಿ ಬೇವಿನ ಉಡಿಗೆ ಉಡುವದು, ಅವರು ಪ್ರಾಚೀನ ಕಥೆಯ ಸಂಕೇತವೂ ಹಾಗೂ ಸಂಪ್ರದಾಯವೂ ಆಗಿದೆ. ಏಕೆಂದರೆ ಪ್ರಾಚೀನ ಕಾಲದಲ್ಲಿ ಜನಸಾಮಾನ್ಯರು ತಪ್ಪಲವನ್ನು ಉಡಿಗೆ

ಯನ್ನಾಗಿ ಮಾಡಿಕೊಳ್ಳುತ್ತಾರೆ. ಅದ್ದರಿಂದ ರೇಣುಕಾ ಎಲ್ಲಮ್ಮನ ಪಂಥದಲ್ಲಿ ಅನೇಕ ಪೌರಾಣಿಕ ಸಂಕೇತಗಳನ್ನು ಹಾಗೆ ಉಳಿಸಿಕೊಂಡು ಬರಲಾಗಿದೆ.

ಜೋಗತಿ ಸಂಪ್ರದಾಯದಲ್ಲಿ ಬರುವ ನಪುಂಸಕವಾದದ ಬಗ್ಗೆ ಸ್ವಲ್ಪ ಹೇಳುವದು ಅವಶ್ಯ. ಈ ನಪುಂಸಕವಾದವು ಈ ಪಂಥಕ್ಕೆ ಮಾತ್ರ ನಿಮಿಂತವಾಗಿ ಉಳಿದಿಲ್ಲ. ಜಗತ್ತಿನ ಅನೇಕ ನಾಗರಿಕ ಪದ್ಧತಿಗಳಲ್ಲಿ ಇದನ್ನು ಕಾಣಬಹುದು. ಚೀನಾ ದೇಶದ ರಾಜಕೀಯ ವರ್ಗಗಳಲ್ಲಿ ಇವರಿಗೆ ಮಹತ್ವವಾದ ಸ್ಥಾನವಿತ್ತು. ಆಫ್ರೀಕಾ ದೇಶದಲ್ಲಿ ಅನೇಕ ಕಾಡು ಜನಾಂಗಗಳು ರಾಜನು ನಪುಂಸಕನಾದರೆ ಅವನು ಅಭಿವೃದ್ಧಿಗೆ ಕಂಟಕನಾದವನೆಂದು ತಿಳಿದುಕೊಂಡು ಕೊಂದು ಹಾಕುತ್ತಾರೆ. ಸುಮೇರಿಯಾದ ಸಂಸ್ಕೃತಿಯಲ್ಲಿ ಯಜ್ಞದ ವಿಧಿಗಳಲ್ಲಿ ನಪುಂಸಕರಿಗೆ ವಿಶಿಷ್ಟ ಸ್ಥಾನವಿತ್ತು. ಅನೇಕ ಸಂಸ್ಕೃತಿಗಳಲ್ಲಿ ನಪುಂಸಕರನ್ನು ರಾಣಿ ವಾಸದಲ್ಲಿ ಕೆಲಸಕ್ಕಾಗಿ ನೇಮಿಸಿಕೊಳ್ಳುತ್ತಿದ್ದರು. ಭಾರತದ ಸಂಸ್ಕೃತಿಯಲ್ಲಿ ಅರ್ಜುನನು ಅಜ್ಞಾತವಾಸದಲ್ಲಿ ಸ್ತ್ರೀವೇಷದಲ್ಲಿ ಕಾಲ ಕಳೆದನು. ಭೀಮನು ಕೀಚಕರನ್ನು ಕೊಲ್ಲುವಾಗ ದ್ರೌಪದಿಯ ವೇಷದಲ್ಲಿ ಅವನಿಗೆ ಕಾಣಿಸಿ ಕೊಂಡನು. ಷಂಢತ್ವವನ್ನು ಮತ್ತು ಉಭಯ ಲಿಂಗಿಗಳ ಸಮಾಜಗಳನ್ನು ಮಾನವನು ಕಲ್ಯಾಣಕ್ಕಾಗಿ ಬಳಸಿಕೊಂಡಿರುವದು ಅನೇಕ ಸಂದರ್ಭಗಳಲ್ಲಿ ಮತ್ತು ಸಾಂಸ್ಕೃತಿಕ ಇತಿಹಾಸಗಳಲ್ಲಿ ಕಂಡು ಬರುತ್ತದೆ.

ಜೋಗತಿಯರು ತಮ್ಮ ಸಮಾಜದಲ್ಲಿ ಧರ್ಮ ಪ್ರಚಾರಕರಂತೆ

ಕೆಲಸ ಮಾಡಿದ್ದಾರೆ. ಇದರಲ್ಲಿ ನಪುಂಸಕರಾದವರು ಸಹಿತ ಮಾನವ ಧರ್ಮಕ್ಕೆ ಕಲ್ಯಾಣಕಾರಿ ಕೆಲಸವನ್ನು ಮಾಡುತ್ತ ಬಂದಿದ್ದಾರೆ. ಆದರೆ ದುರ್ದೈವದಿಂದ ಜೋಗತಿ ಸಂಪ್ರದಾಯು ದೇವದಾಸಿ ಪದ್ಧತಿಯಂತೆ ವೇಶ್ಯಾವೃತ್ತಿಗೆ ಇಳಿದಿದ್ದರಿಂದ ಅದು ಇಂದು ತನ್ನ ನೈತಿಕ, ಧಾರ್ಮಿಕ ಮತ್ತು ಸಾಮಾಜಿಕ ಮಹತ್ವ ವನ್ನು ಕಳೆದು ಕೊಂಡಿದೆ, ಬಡವರಿಗೆ, ವಿಧವೆಯರಿಗೆ, ನಿಸ್ಸಹಾಯಕರಿಗೆ ಒಂದು ಊರು ಗೋಲಾಗಿದೆ. ಅವರು ಕೆಲವು ಸಲ ಧರ್ಮದ ಹೆಸರಿನಲ್ಲಿ ತಮ್ಮ ಹೊಟ್ಟೆ ತುಂಬಿ ಕೊಳ್ಳುವಂತೆ ಆಗಿದೆ.

ಈ ಪ್ರಕಾರದ ಜೋಗತಿ ಪದ್ಧತಿಯು ದೇವದಾಸಿ ಪದ್ಧತಿಯ ಒಂದು ಪ್ರಕಾರವಾಗಿದೆ. ದೇವದಾಸಿಯರಿಗೆ ಧರ್ಮ ಪ್ರಸಾರ ಮಾಡುವದು ಇಲ್ಲವೆ ಧರ್ಮದ ಹೆಸರಿನಲ್ಲಿ ಭಿಕ್ಷೆ ಬೇಡುವದು ಮುಖ್ಯ ಕೆಲಸವಾಗಿರುವದಿಲ್ಲ. ಆದರೆ ಜೋಗತಿ ಯರು ಎಲ್ಲಮ್ಮನ ಪಂಥದ ಪ್ರಸಾರಕರೂ ಆಚಾರವಂತರು ಮತ್ತು ಭಿಕ್ಷುಕರು ಆಗಿದ್ದಾರೆ. ಆದ್ದರಿಂದ ಜೋಗತಿ ಪದ್ಧತಿ, ದೇವದಾಸಿ ಪದ್ಧತಿ ಮತ್ತು ವೇಶ್ಯಾವೃತ್ತಿಗಳಲ್ಲಿ ಮೂಲತಃ ಮುಖ್ಯ ವ್ಯತ್ಯಾಸಗಳಿವೆ.

## ೪. ದೇವದಾಸಿ ಪದ್ಧತಿಯ ಬೆಳವಣಿಗೆ

ದೇವದಾಸಿಯರು ಮೊದಲಿನಿಂದಲೂ ನೃತ್ಯಗಾತಿಯರೆಂದು ದೇವರ ಸೇವಕಿಯರೆಂದು ಹೆಸರು ಗಳಿಸಿದ್ದಾರೆ. ಕ್ರಿ. ಶ. ಪೂ.

೩೦೦೦ ದಲ್ಲಿ ಸಿಂಧೂಕೊಳ್ಳದ ಸಂಸ್ಕೃತಿಯಲ್ಲಿ ದೊರೆತ ಕಂಚಿನ ನೃತ್ಯದ ಭಂಗಿಯಲ್ಲಿದ್ದ ಹುಡುಗಿಯರು ಆಗಿನ ಕಾಲದ ದೇವ ದಾಸಿಯರೆಂದು ಪುರಾತತ್ವ ಶಾಸ್ತ್ರಜ್ಞರ ಅಭಿಪ್ರಾಯವಿದೆ. ಇವರು ದೇವಾಲಯದಲ್ಲಿ ಪೂಜಾರಿಗಳ ನಂತರದ ಸ್ಥಾನವನ್ನು ಪಡೆದಿದ್ದರು. ದೇವಾಲಯಗಳಿಗೆ ಅರ್ಪಿಸಿದ ಜನ್ನಿಗೆ ಹೋರಿ, ಜನ್ನಿಗೆ ಆಕಳು, ಜನ್ನಿಗೆ ಎಮ್ಮೆ ಮತ್ತು ಜನ್ನಿಗೆ ಕೋಣಗಳಿಗೆ 'ಬಸವಿದನ' ಎಂದು ಕರೆಯುವುದುಂಟು. ಇದನ್ನು ನೋಡಿ ದರೆ ದನಗಳನ್ನು ದೇವಾಲಯಗಳಿಗೆ ಅರ್ಪಿಸಿ ಅವುಗಳನ್ನು ಬಲಿಕೊಡುವ ಪದ್ಧತಿ ಪುರಾತನವಾದುದೆಂದು ಅನಿಸುತ್ತದೆ. ಅದೇಪ್ರಕಾರವಾಗಿ ದೇವಾಲಯಗಳಿಗೆ ಬಿಟ್ಟ ಈ ದೇವದಾಸಿ ಯರನ್ನು ದೇವರಿಗೆ ಇಲ್ಲವೇ ಊರ ಹಿತಕ್ಕಾಗಿ ಮತ್ತು ಮಾಂತ್ರಿಕ ಕಾರ್ಯಗಳಿಗಾಗಿ ಇವರನ್ನು ಬಲಿಕೊಡುವುದಕ್ಕಾಗಿ ಆರಿಸಿಕೊಳ್ಳುತ್ತಿದ್ದರಂತೆ. ದೇವಾಲಯಕ್ಕೆ ಬಿಟ್ಟದನಗಳನ್ನು ಮುಂದೆ ಪೀಳಿಗೆ ಬೆಳೆಸುವದಕ್ಕೆ ಉಪಯೋಗಿಸಿಕೊಂಡಂತೆ. ದೇವದಾಸಿಯರು ಯಾರೊಬ್ಬರ ಸ್ವಂತದ ಆಸ್ತಿಯಾಗಿರದೆ ಮನಸ್ಸಿಗೆ ಬಂದವರೊಡನೆ ಸಮಾಗಮ ಮಾಡಲಿಕ್ಕೆ ಹತ್ತಿದಂತೆ ತೋರುತ್ತದೆ. ಗಂಡಸರು ದೇವಾಲಯಗಳಿಗೆ ಅರ್ಪಿಸಲ್ಪ ಟ್ಟರೆ, ಅವರು ನಪುಂಸಕರಾಗಿರದಿದ್ದರೆ ಅವರನ್ನು ನಪುಂಸಕರ ನ್ನಾಗಿಸುತ್ತಿದ್ದರೆಂದು ತಿಳಿದು ಬರುತ್ತದೆ.

ಮಹಾರಾಷ್ಟ್ರದಲ್ಲಿಯ ಜೇಜೂರಿ ಎಂಬಲ್ಲಿಯ ಏಕವೀರಾ (ರೇಣುಕಾ) ಎಂಬ ದೇವತೆಯ ದೇವದಾಸಿಯರನ್ನು ಮತ್ತು ದೇವದಾಸರನ್ನು ಮುರಳಿ ಮತ್ತು ವ್ಯಾಘ್ಯಾ ಎಂದು ಕರೆಯು

ಲಾಗುವದು. ಪೂರ್ವ ಮಹಾರಾಷ್ಟ್ರದಲ್ಲಿ ಬಹಳಷ್ಟು ಮನೆತನದ ಜನರು ಮಹೂರ ಗಡದ ರೇಣುಕಾ ದೇವಿಯನ್ನು ಪೂಜಿಸುತ್ತಾರೆ. (ಕರ್ವೇ ಇರಾವತಿ : ೧೯೬೧ : ೨೫)

ಭವಿಷ್ಯ ಪುರಾಣದ ಪ್ರಕಾರ ಸ್ತ್ರೀಯರನ್ನು ಕೊಂಡು ದೇವಾಲಯಗಳಿಗೆ ಅರ್ಪಿಸಿದರೆ ಪುಣ್ಯಗಳಿಸುವದು ಸಾಧ್ಯವೆಂದು ಹೇಳಲಾಗಿದೆ. ಕ್ರಿ. ಶ. ಪೂರ್ವ ೧೫೦೦ ರ ವೇದಕಾಲದಲ್ಲಿ ದೇವಾಲಯಗಳನ್ನು ನಿರ್ಮಿಸಲಾಗುತ್ತಿಲ್ಲವಾದ್ದರಿಂದ ದೇವಾಲಯಗಳಿಗೆ ದೇವದಾಸಿಯರನ್ನು ಬಿಡುತ್ತಿರಲಿಲ್ಲ. ಆದರೆ ದೇವ ವೇಶ್ಯೆಯರ ಬಗ್ಗೆ ವೇದಗಳಲ್ಲಿ ಉಲ್ಲೇಖವಿದೆ. ಹಿಂದೂ ಜನರ ಪುರಾಣಗಳಲ್ಲಿ ಅಪ್ಸರೆಯರು, ಪದೇ ಪದೇ ಉಲ್ಲೇಖಿಸಲ್ಪಟ್ಟಿದ್ದಾರೆ. ಕ್ರಿ. ಶ. ೨ನೆಯ ಶತಮಾನದ ಹೊತ್ತಿಗೆ ದೇವದಾಸಿ ಪದ್ಧತಿಯು ಭಾರತದಲ್ಲಿ ಬಹಳಷ್ಟು ಪಸರಿಸಿಕೊಂಡು ಬಿಟ್ಟಿತೆಂದು ತಿಳಿದು ಬರುತ್ತದೆ.

ಮುಸ್ಲಿಂ ದಾಳಿಗಾರರು ಭಾರತದಲ್ಲಿಯ ದೇವದಾಸಿ ಪದ್ಧತಿಯು ಕಡಿಮೆಯಾಗಲಿಕ್ಕೆ ಮೊಟ್ಟ ಮೊದಲಿಗೆ ಕಾರಣರಾಗಿದ್ದರು. ೧೫ನೆಯ ಶತಮಾನದ ವಿಜಯನಗರ ರಾಜ್ಯದಲ್ಲಿ ತುರ್ಕಸ್ಥಾನದ ರಾಯಭಾರಿಯಾದ ಅಬ್ದುಲ್ ರಝಾಕ್ ಎಂಬವರ ಪ್ರಕಾರ ಪ್ರತಿಯೊಂದು ದೇವಾಲಯಕ್ಕೆ ೧೦೦ ದೇವದಾಸಿಯರಿರುತ್ತಿದ್ದರು. ೧೯ನೆಯ ಶತಮಾನದಲ್ಲಿ ಕಂಜೀವರಂದಲ್ಲಿಯ ದೇವಾಲಯಕ್ಕೆ ೧೦೦ ಮಂದಿ ದೇವದಾಸಿಯರಿರುತ್ತಿದ್ದರು. ಸದ್ಯ ತಂಜಾವೂರಿನ ದೇವಾಲಯದಲ್ಲಿ ಕೇವಲ ೧೫ ದೇವದಾಸಿಯರಿದ್ದಾರೆ. ೧೯೨೦ ರ ಮತ್ತು

೧೯೩೦ ರ ದಶಕಗಳಲ್ಲಿ ದೇವದಾಸಿ ಪದ್ಧತಿಯನ್ನು ನಿಲ್ಲಿಸಲು ಮಾಡಿದ ಪ್ರಾಂತೀಯ ಸರಕಾರಗಳ ಪ್ರಯತ್ನವು ಸಫಲವಾಗಲಿಲ್ಲ. ಏಕೆಂದರೆ ಧಾರ್ಮಿಕ ಪ್ರಭಾವದಿಂದ ಕೂಡಿದ ಈ ಪದ್ಧತಿಯನ್ನು ನಿಲ್ಲಿಸುವಲ್ಲಿ ಬ್ರಿಟೀಷರು ಆಸಕ್ತಿ ತೋರಿಸಲಿಲ್ಲ.

ತಮಿಳು ನಾಡಿನಲ್ಲಿ ದೇವದಾಸಿಯರನ್ನು 'ದೇವರತಿಯಲ್' ಎಂದು ಕರೆದರೆ ತಿರುವಾಂಕೂರು ಪ್ರದೇಶದಲ್ಲಿ ಅವರನ್ನು 'ಕುಡಿಕಾರ' ಎಂದು ಕರೆಯುತ್ತಾರೆ. ಗೋವಾ ಮತ್ತು ಪಶ್ಚಿಮ ಭಾರತದಲ್ಲಿ ಅವರನ್ನು 'ಭಾವಿನಿಯರೆಂದು ಕರೆಯಲಾಗುವದು. ಇವರಿಗೆ ಕರ್ನಾಟಕದಲ್ಲಿ ಬಸವಿಯರೆಂದು ಕರೆಯುತ್ತಾರೆ. ಮೈಸೂರು ಪ್ರಾಂತದ ಬಸವಿಯರನ್ನು ಗರುಡ ಬಸವಿಯರು, ಲಿಂಗ ಬಸವಿಯರು ಮತ್ತು ಹೆಣ್ಣು ಬಸವಿಯರೆಂದು ಮೂರು ರೀತಿಯಾಗಿ ವಿಂಗಡಿಸಲಾಗಿದೆ. ಮೊದಲನೆಯ ರೀತಿಯುವರು ವಿಷ್ಣುವಿಗೆ ಅರ್ಪಿತವಾದವರು ಎರಡನೆಯ ರೀತಿಯುವರು ಶಿವನಿಗೆ ಅರ್ಪಿತವಾದವರು ಮತ್ತು ಮೂರನೆಯವರಾದ ಹೆಣ್ಣು ಬಸವಿಯರು, ಊರ ಹೆಣ್ಣು ದೇವತೆಗಳಿಗೆ ಅರ್ಪಿತವಾದವರು. ಗರುಡ ಬಸವಿಯರಿಗೆ ಬಲಗಡೆಯ ಎದೆಯ ಮೇಲೆ ಗರುಡನ ಚಿತ್ರವನ್ನು ಹಚ್ಚೆಯಿಂದ ತೆಗೆಯಲಾಗುವದು. ಲಿಂಗ ಬಸವಿಯರಿಗೆ ಅವರ ತೊಡೆಯ ಮೇಲೆ ಲಿಂಗವನ್ನು ಹಚ್ಚೆಯಿಂದ ತೆಗೆಯಲಾಗುವದು.

ಮುಂಬೈ — ಕರ್ನಾಟಕದ ಬಸವಿಯರನ್ನು ಬಾಲಬಸವಿಯರೆಂದು ಮತ್ತು ಬಟ್ಟಲು ಬಸವಿಯರೆಂದು ಎರಡು ರೀತಿಯಿಂದ ವಿಭಜಿಸಲಾಗುತ್ತಿತ್ತು. ಬಾಲಬಸವಿಯರು ತಂಬೂರಿ ಬಾರಿಸುವದನ್ನು ಮತ್ತು ಕಣಿ ಹೇಳುವದನ್ನು ಮಾಡುತ್ತಿದ್ದರು. ಬಟ್ಟಲು ಬಸವಿಯರು ಬಟ್ಟಲವನ್ನು ಹೊರುತ್ತಿದ್ದರು. ಆ ಬಟ್ಟಲದೊಂದಿಗೆ ಅವರು ಪೇಟೆಯಲ್ಲಿ ತಿರುಗಾಡಿ ತಮಗೆ ಬೇಕಾದಷ್ಟು ಧಾನ್ಯವನ್ನು ಭಿಕ್ಷೆಯಿಂದ ಸಂಗ್ರಹಿಸುತ್ತಿದ್ದರು.

ಲಿಂಗಾಯತ ಬಸವಿಯು ಭವಿಯೊಡನೆ (ಲಿಂಗಾಯತನಲ್ಲದ ಪುರುಷನೊಡನೆ) ಸಂಗಮಾಡಿದರೆ ಅವಳ ಬಟ್ಟೆಯನ್ನು ಕಸಿದುಕೊಂಡು ಅವಳನ್ನು ನಿರ್ಗತಿಕಳನ್ನಾಗಿ ಮಾಡುತ್ತಿದ್ದರು. ಅಂದರೆ ಅವಳು ಲಿಂಗಾಯತ ಧರ್ಮಕ್ಕೆ ವಿಧೇಯಳಾಗಿರಬೇಕಾಗುತ್ತಿತ್ತು.

ಅಬ್ಬೆ J. A. ದುಬಾಯಿಸ್ (Abbe. J. A. Dubois) ಎಂಬ ಮಾನವ ಶಾಸ್ತ್ರಜ್ಞರು ೧೮ ನೆಯ ಮತ್ತು ೧೯ ನೆಯ ಶತಮಾನಗಳಲ್ಲಿ ದಕ್ಷಿಣ ಹಿಂದೂಸ್ತಾನದಲ್ಲಿ ಪ್ರವಾಸ ಮಾಡಿ ದೇವಾಲಯಗಳ ಪೂಜಾರಿಗಳು ಯಾವ ಪ್ರಕಾರವಾಗಿ ಸುಂದರ ಸ್ತ್ರೀಯರನ್ನು ದೇವದಾಸಿಯರನ್ನಾಗಿಸುತ್ತಿದ್ದರೆಂದು ಬರೆಯುತ್ತಾರೆ. ಆಂಧ್ರಪ್ರದೇಶದಲ್ಲಿಯ ತಿರುಪತಿಯ ಶ್ರೀ ವೆಂಕಟೇಶ್ವರ ದೇವಸ್ಥಾನಕ್ಕೆ ವಾರ್ಷಿಕ ಮೆರವಣಿಗೆಯ ಕಾಲಕ್ಕೆ ದೊಡ್ಡ ಜಾತ್ರೆಯೇ ನೆರೆಯುತ್ತದೆ. ಆಗ ಮೆರವಣಿಗೆಯಲ್ಲಿದ್ದ ಸುಂದರ ಸ್ತ್ರೀಯರನ್ನು ಗುರುತಿಸಿ ಅವರ ಗಂಡದಿರಿಂದಲೋ ಅಥವಾ ತಂದೆ–ತಾಯಿಗಳಿಂದಲೋ ಶ್ರೀ ವೆಂಕಟೇಶ್ವರನಿಗಾಗಿ ಆಯ್ದು

ಕೊಳ್ಳುತ್ತಿದ್ದರು. ಇಂಥ ಸ್ತ್ರೀಯರು ದೇವದಾಸಿಯರಾಗುತ್ತಿದ್ದರು. ಮತ್ತು ಈ ದೇವದಾಸಿಯರು ಸಾಕಷ್ಟು ಮುದುಕಿಯರಾದ ನಂತರ ಅವರ ತೊಡೆಯ ಮೇಲೆ ಇಲ್ಲವೆ ಎದೆಯ ಮೇಲೆ ಕಾಯ್ದ ಕಬ್ಬಿಣದಿಂದ ಮುದ್ರೆಹಾಕಿಸಿಕೊಂಡು ಸಾರ್ವಜನಿಕರಿಂದ ದೇವದಾಸಿಯರಂತೆ ಭಿಕ್ಷೆ ಬೇಡುವ ಹಕ್ಕನ್ನು ಪಡೆಯುತ್ತಿದ್ದರು. "ಇಂಥ ಮುದ್ರೆಹಾಕುವ ಪೂಜಾರಿಗಳು ಆಂಧ್ರ, ಕರ್ನಾಟಕ ಮತ್ತು ತಮಿಳು ನಾಡಿನ ಪ್ರದೇಶಗಳಲ್ಲಿ ತುಂಬಿ ಹೋಗಿದ್ದಾರೆ. ಪುರಿಯ ಜಗನ್ನಾಥ ದೇವಾಲಯದಲ್ಲಿಯೂ ಇದೇ ಪ್ರಕಾರವಾಗಿ ನಡೆಯುತ್ತದೆ ಎಂದು ತಿಳಿದು ಬರುತ್ತದೆ."

## ದೇವದಾಸಿಯರು

ಶಬ್ದಶಃ ದೇವದಾಸಿಯರೆಂದರೆ ದೇವರ ಸೇವಿಕೆಯರು. ದಕ್ಷಿಣ ಹಿಂದೂಸ್ಥಾನದಲ್ಲಿ ಇವರೆಲ್ಲ ವೇಶ್ಯಾವೃತ್ತಿಯಿಂದಲೇ ಜೀವಿಸುತ್ತಾರೆ. ತಮಿಳು ನಾಡಿನ ದೇವಾಲಯಗಳಲ್ಲಿ ದೇವರ ಮೂರ್ತಿಯ ಎದುರಿಗೆ ನಾಟ್ಯ ಮಾಡುವದು ಮತ್ತು ಹಾಡು-ವದು ಇವರ ಕೆಲಸಗಳಾಗಿದ್ದವು. ಕೆಲವರು ವೇಶ್ಯೆಯರಾಗಿದ್ದಾರೆ. ಮತ್ತೆ ಕೆಲವರು ಹಣಕೊಟ್ಟವರಿಗೆಲ್ಲ ಸೇವೆ ಸಲ್ಲಿಸಿ ಬಂದ ಗಳಿಕೆಯಲ್ಲಿ ಕೆಲವನ್ನು ಪುಜಾರಿಗಳಿಗೂ ಕೊಡುತ್ತಿದ್ದರು. ಈ ದೇವಾಲಯಗಳಿಗೆ ಸಂಬಂಧಿಸಿದ ಕೆಲವು ದೇವದಾಸಿಯರು ಸಾರ್ವಜನಿಕ ಮತ್ತು ವೈಯಕ್ತಿಕ ಸಮಾರಂಭಗಳಲ್ಲಿ ಹಾಡುವ-

ದನ್ನು ಮತ್ತು ಕುಣಿಯುವದನ್ನು ಮಾಡುತ್ತಿದ್ದರು. ಕ್ರಿ. ಶ. 1004 ರಲ್ಲಿಯ ಒಂದು ದೇವಾಲಯದಲ್ಲಿಯ ಶಿಲಾಶಾಸನವು ತಂಜಾವೂರದ ಚೋಳ ಅರಸನಾದ ಶ್ರೀ ರಾಜಾರಾಜ ಅರಸನಿಗೆ 400 ದೇವದಾಸಿಯರು ಇದ್ದರೆಂದು ತಿಳಿಸುತ್ತದೆ. ಆಗಿನ ಕಾಲದಲ್ಲಿ ಈ ಪದ್ಧತಿಗೆ ಧಾರ್ಮಿಕ ಬೆಂಬಲವಿದ್ದಿತು. ಆದ್ದರಿಂದ ಅದನ್ನು ಯಾರೂ ಅನೈತಿಕವೆಂದು ತಿಳಿದುಕೊಂಡಿರಲಿಲ್ಲ. ಮರ್ಯಾದೆಯುಳ್ಳ ಸ್ತ್ರೀಯರು ತಮ್ಮ ಹೆಣ್ಣು ಮಕ್ಕಳನ್ನು ಈ ಉದ್ದೇಶಕ್ಕಾಗಿ ಪೂಜಾರಿಗಳಿಗೆ ಅರ್ಪಿಸುತ್ತಿದ್ದರು.

ಅಬ್ಬೆ J. A. ದುಬಾಯಿಸ್ ಎಂಬ ಮಾನವಶಾಸ್ತ್ರಜ್ಞರು 19ನೇ ಶತಮಾನದ ಪೂರ್ವಭಾಗದಲ್ಲಿ ದಕ್ಷಿಣ ಹಿಂದುಸ್ಥಾನದ ದೇವಾಲಯಗಳು ವೇಶ್ಯಾಗೃಹಗಳಂತೆ ಪರಿವರ್ತಿತವಾಗಿರುವ ದನ್ನು ವರ್ಣಿಸುತ್ತಾರೆ. ಅವರ ಕರ್ತವ್ಯಗಳೆಂದರೆ ದೇವಾ-ಲಯಗಳಲ್ಲಿ ದಿನಕ್ಕೊಂದು ಸಲ ಕುಣಿಯುವದು ಮತ್ತು ಹಾಡುವದು ಆಗಿದ್ದವು. ಸ್ವೇಚ್ಛಾಚಾರದ ಮತ್ತು ಕಾಮ ಕೇಳಿಯ ಹಾಡುಗಳನ್ನು ಹಾಡುವದು ಅವರ ಕೆಲಸವಾಗಿತ್ತು. ಈಗಲೂ ಅವರು ಕರ್ನಾಟಕದಲ್ಲಿ ಕಾಮನ ಹಬ್ಬದಲ್ಲಿ ಇಂತಹ ಹಾಡುಗಳನ್ನು ಹೇಳುತ್ತಾರೆ. ಕಾಮನ ಹಬ್ಬದಲ್ಲಿ ಕಾಮನ ದಹನಕ್ಕಾಗಿ ಕೆಲವೊಮ್ಮೆ ಅವರಿಗೆ ಬೆಂಕಿ ಕೊಡುವ ಹಕ್ಕು ಇದೆ. ಪ್ರಾಚೀನ ಭಾರತದಲ್ಲಿ ಅತಿ ಮುಂದುವರಿದ ಇಲ್ಲವೆ ದೇವದಾಸಿಯರು ಆಗಿದ್ದ ಸ್ತ್ರೀಯರಿಗೆ ಮಾತ್ರ ಶಿಕ್ಷಣವು ದೊರಕುತ್ತಿತ್ತು.

ಭಾರತದಲ್ಲಿ ದೇವದಾಸಿ ಪದ್ಧತಿಯು ಮರ್ಯಾದೆಯುತವಾಗಿಯೂ ಪ್ರಾಮಾಣಿಕತೆಯಿಂದಲೂ, ಧಾರ್ಮಿಕವಾಗಿಯೂ ನಡೆಯುವ ಪದ್ಧತಿಗಳಿಗೆ ಅನುಸಾರವಾಗಿ ಆಚರಿಸ್ಪಡುತ್ತಿತ್ತು. ಕೆಲವೊಂದು ದೇವದಾಸಿಯರನ್ನು ಬಿಟ್ಟರೆ ವೇಶ್ಯಾವೃತ್ತಿಯು ದೇಶದಲ್ಲಿ ಅತಿ ಕಡಿಮೆಯಾಗಿತ್ತಲ್ಲದೆ ಲೈಂಗಿಕ ಸ್ವಾಯತ್ತತೆಯು ಅತಿ ಉಚ್ಚಮಟ್ಟದಲ್ಲಿತ್ತು.

ಭಾರತದಲ್ಲಿ ಆಧುನಿಕ ಯುಗದಲ್ಲಿ ದೇವದಾಸಿಯರು ಮಾತ್ರ ಗುಡಿ-ಗುಂಡಾರುಗಳ ಹೊರಗೆ ಜನರನ್ನು ಜಾತಿಭೇದಗಳಿಲ್ಲದೆ ಮತ್ತು ಮಡಿ ಮೈಲಿಗೆಯೆನ್ನದೆ ಹಾಡಿ ಕುಣಿದು ತಣಿಸಿದರು. ಅಲ್ಲಿಯವರೆಗೆ ಹಾಡು ಕುಣಿತಗಳು ಕೇವಲ ದೇವಾಲಯದ ಪೂಜಾರಿಗಳ ಮತ್ತು ರಾಜವರ್ಗದ ಜನರ ಸೊತ್ತುಗಳಾದವು.

ಭಾರತದ ಪ್ರಾಚೀನಕಾಲದಲ್ಲಿ ವೇಶ್ಯಾವೃತ್ತಿಯು ಸರಕಾರದ ವಿಭಾಗಗಳಿಂದ ಸರಿಯಾಗಿ ಸುವ್ಯವಸ್ಥಿತಗೊಳಿಸಲ್ಪಟ್ಟಿತ್ತು ಎಂದು ಕೌಟಿಲ್ಯನ ಅರ್ಥಶಾಸ್ತ್ರದಿಂದ ತಿಳಿದು ಬರುತ್ತದೆ. ಕೆಲವೊಮ್ಮೆ ದೇವಾಲಯಗಳಿಗೆ ಹಣಗಳಿಸುವದಕ್ಕೆ ವೇಶ್ಯಾವೃತ್ತಿಯು ಬೆಳೆದಂತೆ ತೋರುತ್ತದೆ. ಎಂದು ವಿಲ್‌ಡುರಷ್ಟ (will Durest) ಎಂಬ ಇತಿಹಾಸಜ್ಞರ ಅಭಿಪ್ರಾಯವಿದೆ.

ಸುಮೇರಿಯಾದಲ್ಲಿ ಪ್ರತಿಯೊಂದು ದೇವಾಲಯಗಳಿಗೆ ಸ್ತ್ರೀಯರನ್ನು ದೇವದಾಸಿಯರನ್ನಾಗಿ ಬಿಡಲಾಗುತ್ತಿತ್ತು. ಹೀಗೆ ದೇವಾಲಯದ ಸೇವೆ ಮಾಡುವದು ಸುಮೇರಿಯಾದ

ಹುಡುಗಿಯರಿಗೆ ಯಾವದೆ ತರದ ಅವಮಾನಕರ ಕೆಲಸವೆಂದು ಅನ್ನಿಸುತ್ತಿದ್ದಿಲ್ಲ. ಆ ಹುಡುಗಿಯ ತಂದೆ ತಾಯಿಗಳು ಅವಳನ್ನು ಈ ಉದ್ಯೋಗಕ್ಕೆ ಹಚ್ಚುವದು ಒಂದು ಹೆಮ್ಮೆಯ ವಿಷಯವೆಂದು ತಿಳಿದುಕೊಂಡು ಅದರಿಂದ ಬಂದ ಹಣವನ್ನು ದೇವಾಲಯುಗಳಿಗೆ ಕೊಡುತ್ತಿದ್ದರು.

ಪ್ರಾಚೀನ ಇಜಿಪ್ತದಲ್ಲಿ ತಕ್ಕ ಮಟ್ಟಿಗೆ ದೇವದಾಸಿ ಪದ್ಧತಿ ಇದ್ದುದು ಕಂಡು ಬರುತ್ತದೆ. ಅತಿ ಹೆಚ್ಚಿನ ವರ್ಗದ ಸುಂದರಿಯರನ್ನು ಅರಮನೆಯ ದೇವತೆಯಿಂದ ಪವಿತ್ರ ಗೊಳಿಸಲಾಗುತ್ತಿತ್ತು. ಅವಳು ಬಹಳದಿನ ಈ ರೀತಿ ಕಳೆದ ನಂತರ ದೇವಾಲಯದಿಂದ ಹೊರಗೆ ಹಾಕಿ ಮದುವೆಯಾಗಲು ಅಪ್ಪಣೆ ಕೊಡಲಾಗುತ್ತಿತ್ತು. ಈ ಪ್ರಕಾರವಾಗಿ ಅವಳು ಮದುವೆಯಾಗಿ ಮರ್ಯಾದೆಯುತ ಸ್ತ್ರೀಯರಿಗೆ ಸರಿಸಮಾನವಾಗಿ ಇರುತ್ತಿದ್ದಳು.

ಪ್ರಾಚೀನ ಬ್ಯಾಬಿಲೋನಿಯಾ ದೇಶದಲ್ಲಿಯ ದೇವದಾಸಿ ಪದ್ಧತಿಯ ಬಗ್ಗೆ ಹೆರೊಡೊಟಸ್ (Herodotus) ಎಂಬ ಇತಿಹಾಸಕಾರನು ಈ ರೀತಿಯಾಗಿ ಬರೆಯುತ್ತಾನೆ : ''ಈ ದೇಶದ ಪ್ರತಿಯೊಬ್ಬ ಸ್ತ್ರೀಯು ವೀನಸ್ ದೇವತೆಯ ಗುಡಿಯಲ್ಲಿ ತನ್ನ ಜೀವಮಾನದಲ್ಲಿ ಒಮ್ಮೆಯಾದರೂ ಕುಳಿತುಕೊಳ್ಳಬೇಕು. ಮತ್ತು ಅಪರಚಿತನೊಡನೆ ಸಮಾಗಮ ಮಾಡಬೇಕು. ಆದ್ದರಿಂದ ಕುಲೀನ ಸ್ತ್ರೀಯರು ಒಮ್ಮೊಮ್ಮೆ ತಮ್ಮ ಸೇವಕರೊಡನೆ ವಾಹನಗಳಲ್ಲಿ ಅಲ್ಲಿಗೆ ಬಂದು ಬೇಗ ಇಂಥ ಸೌಭಾಗ್ಯವನ್ನು ಪಡೆಯುತ್ತಿದ್ದರು. ಇಂಥ ಸೌಭಾಗ್ಯ ಸಿಗದ ಕುರೂಪಿ ಸ್ತ್ರೀಯರು ಕೆಲವೊಮ್ಮೆ ೪–೫ ವರ್ಷಗಳ ವರೆಗೆ ಸಮಾಗಮಕ್ಕಾಗಿ ದೇವಾಲ

ಯುದಲ್ಲಿ ಕಾಯ್ದು ಕುಳಿತುಕೊಳ್ಳಬೇಕಾಗುತ್ತಿತ್ತು. ಇಂತಹ ಪದ್ಧತಿಯು ವೇಶ್ಯಾವೃತ್ತಿಗೆ ಸರಿಸಮಾನವೆಂದು ತಿಳಿದುಕೊಳ್ಳುತ್ತಿರಲಿಲ್ಲ. ಆದರೆ ಅನೇಕ ವರ್ಗಗಳ ವೇಶ್ಯೆಯರು ದೇವಾಲಯಗಳಲ್ಲಿ ಇರುತ್ತಿದ್ದರು. ಮತ್ತು ಹಣದ ಗಳಿಕೆಯನ್ನು ಮಾಡುತ್ತಿದ್ದರು. ಇಂಥ ದೇವದಾಸಿಯರು ಇಸ್ರಾಯಲ್‌ದಲ್ಲಿ ಫೋನೇಸಿಯಾದಲ್ಲಿ ಮತ್ತು ಸಿರಿಯ ಮೊದಲಾದ ದೇಶಗಳಲ್ಲಿ ಇರುತ್ತಿದ್ದರು ಲಿಡಿಯಾ ಮತ್ತು ಸಾಯಪ್ರಸ್‌ದಲ್ಲಿ ಬಾಲಕಿಯರು ದೇವದಾಸಿಯರಂತೆ ಕೆಲವು ದಿವಸ ಕಳೆದು ತಮ್ಮ ಮದುವೆಗೆ ಬೇಕಾದ ವರದಕ್ಷಿಣೆ ಹಣವನ್ನು ಗಳಿಸುತ್ತಿದ್ದರು. ಬ್ಯಾಬಿಲೋನಿಯಾದಲ್ಲಿ ಕ್ರಿ. ಶ. ೩೨೫ರ ವರೆಗೆ ದೇವದಾಸಿ ಪದ್ಧತಿಯು ಮುಂದುವರಿಯಿತು.

ಪ್ರಾಚೀನ ಅಸೀರಿಯದಲ್ಲಿ ವೇಶ್ಯಾವೃತ್ತಿಯು ಅನಿವಾರ್ಯವಾಗಿತ್ತು. ಮತ್ತು ಅದನ್ನು ಸರಕಾರವೇ ನಡೆಸುತ್ತಿತ್ತು. ಚೀನಿಯರು ಮತ್ತು ಗ್ರೀಕ್ ಪ್ರಾಚೀನ ನಿವಾಸಿಗಳಲ್ಲಿ ಪುರುಷರು ವೇಶ್ಯಾ ಗೃಹಗಳಲ್ಲಿ ಸ್ತ್ರೀಯರಂತೆ ವೇಶ್ಯಾವೃತ್ತಿಯನ್ನು ನಡೆಸುತ್ತಿದ್ದರು. ಜಪಾನದಲ್ಲಿ ಗೇಷಾ (Geisha) ಪದ್ಧತಿಯು ಸ್ತ್ರೀಯರಿಗೆ ಹಾಡುವದರಲ್ಲಿ ಮತ್ತು ಕುಣಿಯುವದರಲ್ಲಿ ತರಬೇತಿ ಕೊಡುತ್ತಿತ್ತು.

**ಭಾರತದಲ್ಲಿ ದೇವದಾಸಿ ಪದ್ಧತಿ :** ಪ್ರಾಚೀನ ಹಿಂದೂಗಳ ಸಾಹಿತ್ಯದಲ್ಲಿ 'ಏಳು' ಬಗೆಯ ದಾಸಿಯರಿರುವ ಬಗ್ಗೆ ಹೇಳಲಾಗಿದೆ ಅವು :

೧) ದತ್ತಾ, ಅಂದರೆ ಗುಡಿಗಳಿಗೆ ದಾನ ಕೊಡುವವಳು.

೨) ವಿಕೃತ, ಅದೇ ಉದ್ದೇಶಕ್ಕಾಗಿ ತನ್ನನ್ನೇ ಮಾರಿಕೊಳ್ಳು ವವಳು.

೩) ಬೃತ್ಯಾ, ತನ್ನ ಕುಟುಂಬಕ್ಕಾಗಿ ದೇವಾಲಯುಗಳಿಗೆ ಸೇವೆ ಸಲ್ಲಿಸುವವಳು.

೪) ಭಕ್ತ, ದೇವಾಲಯುಗಳಿಗೆ ಭಕ್ತಿಯುನ್ನು ಸಲ್ಲಿಸುವವಳು.

೫) ಹೃತಾ, ದೇವಾಲಯುಗಳಿಗೆ ಅರ್ಪಿತವಾದಳು.

೬) ಅಲಂಕಾರ, ಅರಸರಿಂದ ದೇವಾಲಯುಗಳಿಗೆ ಅರ್ಪಿತ ವಾದವಳು.

೭) ಗೋಪಿಕಾ, ದೇವಾಲಯುಗಳಲ್ಲಿ ಹಾಡಿ ಕುಣಿಯುವದ ಕ್ಕಾಗಿ ನೇಮಿಸಲ್ಪಟ್ಟವಳು.

ತಮಿಳು ನಾಡಿನ ದೇವಾಲಯುಗಳಲ್ಲಿ ಹಾಡುವವರಿಗೆ ಮತ್ತು ಕುಣಿಯುವರಿಗೆ ದೇವದಾಸಿಯರೆಂದು ಹೇಳುವದುಂಟು. ಹಿಂದೂ ಶಾಸ್ತ್ರಗಳ ಪ್ರಕಾರ ದೇವದಾಸಿ ಪದ್ಧತಿಯುನ್ನು ಹೀಗಳೆ ಯಲಾಗಿದ್ದರೂ ಪರಂಪರೆಯಾಗಿ ಸಮಾಜದಲ್ಲಿ ಈ ಪದ್ಧತಿ ಇಂದಿಗೂ ನಡೆದು ಬಂದಿದೆ. ೯ ನೆಯ ಶತಮಾನದಿಂದಲೂ ಈ ಪದ್ಧತಿಯು ರೂಢಿಗತವಾಗಿರುವ ದಾಖಲೆಗಳು ಸಿಗುತ್ತವೆ. ದೇವದಾಸಿಯರು ದೇವಾಲಯುಗಳಲ್ಲಿಯ ದೇವರ ಮೂರ್ತಿ ಗಳಿಗೆ ಚಾಮರ ಬೀಸಬೇಕಾಗುತ್ತಿತ್ತು.

ಪವಿತ್ರವಾದ ಕುಂಭಾರ್ತಿಯುನ್ನು ಹೊರುವದು ಇವರ ಕೆಲಸ ವಾಗಿತ್ತು. ಮೆರವಣಿಗೆಗಳಲ್ಲಿ ಹಾಡುವದನ್ನು ಮತ್ತು ಕುಣಿ ಯುವದನ್ನು ಮಾಡಬೇಕಾಗುತ್ತಿತ್ತು. ಮಧುರೆ, ಕಾಂಜ-

ಪರಮ ಮತ್ತು ತಂಜಾವೂರಗಳಲ್ಲಿ ಇನ್ನೂ ಇಂಥ ಅನೇಕ ದೇವದಾಸಿಯರಿರುತ್ತಾರೆ.

ಈ ದಿನಗಳಲ್ಲಿ ದೇವದಾಸಿಯರ ಒಂದು ಗುಂಪೇ ಅಸ್ತಿತ್ವಕ್ಕೆ ಬಂದಿದೆ. ಅವರು ತಮ್ಮದೆ ಆದ ಹಕ್ಕನ್ನು ಪಡೆಯುವ ಪದ್ಧತಿಗಳನ್ನು ಅನುಸರಿಸುವ ಮತ್ತು ಪಂಚಾಯತಿಗಳನ್ನು ನಡೆಸುವ ವಿಧಿಗಳನ್ನು ನಿರ್ಮಿಸಿಕೊಂಡಿದ್ದಾರೆ. ಇಂಥ ಪದ್ಧತಿಯು ಹಿಂದೂ ಸಮಾಜಕ್ಕೆ ತನ್ನದೇ ಆದ ವಿಶಿಷ್ಟ ರೀತಿಯ ದೇವದಾಸಿ ಪದ್ಧತಿಯು ತಂದುಕೊಟ್ಟಿದೆ. ದೇವ ದಾಸಿಯರು ಯಾವುದಾದರೊಂದು ದೇವರಿಗೆ ಇಲ್ಲವೆ ಅವನ ಖಡ್ಗಕ್ಕೆ ಮದುವೆಯಾಗಿ ಆ ದೇವರದಾಸಿಯಾಗುತ್ತಾಳೆ.

ತಮಿಳುನಾಡಿನ ದೇವದಾಸಿಯರಲ್ಲಿ ಬಲಗೈ ಮತ್ತು ಎಡಗೈ ದೇವದಾಸಿಯರೆಂಬ ಎರಡು ಬಗೆಗಳಿವೆ. ಎಡಗೈ ದೇವದಾಸಿ-ಯರು ಕೆಳಜಾತಿಗಳ ಜನರೊಡನೆ ಸಂಪರ್ಕವಿಟ್ಟುಕೊಳ್ಳು-ತ್ತಾರೆ. ಆದರೆ ಬಲಗೈ ಜಾತಿಯ ದಾಸಿಯರು ಉಚ್ಚ ಜಾತಿಯ ಜನರೊಡನೆ ಮಾತ್ರ ಸಮಾಗಮ ಮಾಡಬಹುದು.

ತೆಲುಗು ನಾಡಿನಲ್ಲಿ ದೇವದಾಸಿಯರನ್ನು ಜೋಗಮ್ಮಾ ಮತ್ತು ಸಾನಿಯರೆಂದು ಕರೆಯಲಾಗುತ್ತದೆ. ಆಂಧ್ರ ಪ್ರದೇಶದ ಉತ್ತರ ಭಾಗದಲ್ಲಿ ಮತ್ತು ವಿಶಾಖಪಟ್ಟಣದಲ್ಲಿ ಮುಖ್ಯವಾಗಿ ದೇವದಾಸಿ ಪದ್ಧತಿ ಕಂಡು ಬರುತ್ತದೆ. ಇಲ್ಲಿ ವೇಶ್ಯೆಯರ ಹೆಸರುಗಳ ಮುಂದೆ 'ಸಾನಿ' ಎಂಬ ಪದ ಜೋಡಿ ಸುವ ಸಾಂಪ್ರದಾಯವಿದ್ದು ಕರ್ನಾಟಕದಲ್ಲಿಯೂ ಇದು ಕಂಡು ಬರುತ್ತದೆ. ತೆಲುಗುನಾಡಿನ ಮತ್ತೊಂದು ಮಗ್ಗಲಿನ ನಾಡಾದ

ಓರಿಸ್ಸಾ ಪ್ರಾಂತದಲ್ಲಿ ದೇವದಾಸಿಯರನ್ನು 'ಗಂಣಿ' ಎಂದು ಕರೆಯುತ್ತಾರೆ.

ಕರ್ನಾಟಕದಲ್ಲಿ ಮುಖ್ಯವಾಗಿ ಬೋಯಾ, ಬೇಡರು ಮತ್ತು ಕೆಲವು ಹರಿಜನ ಜಾತಿಗಳಲ್ಲಿ ದೇವದಾಸೀ ಪದ್ಧತಿ ಇರುವುದು ಕಂಡುಬರುತ್ತದೆ. ಇವರಲ್ಲಿ ಗಂಡು ಸಂತಾನವಿಲ್ಲದವರು ತಮ್ಮ ವಂಶಬೆಳೆಯಲು ಬೇಕಾದ ಒಂದು ಗಂಡು ಮಗುವಿಗಾಗಿ ತಮ್ಮ ಬಸವಿ ಹೆಣ್ಣು ಮಕ್ಕಳನ್ನು ಮನೆಯಲ್ಲಿಯೇ ಇಟ್ಟು ಕೊಳ್ಳುತ್ತಾರೆ. ಈ ಪದ್ಧತಿಯಂತೆ ಹುಡುಗಿಯರನ್ನು ತಮ್ಮ ಆರಾಧ್ಯ ದೇವರ ದೇವಾಲಯಗಳಿಗೆ ಕರೆದುಕೊಂಡು ಹೋಗಿ ಅಲ್ಲಿ ಆಕೆಯನ್ನು ದೇವರಿಗೆ ಮದುವೆ ಮಾಡಲಾಗುವದು. ದೇವರ ಪರವಾಗಿ ಪೂಜಾರಿಯಿಂದ ಆವಳಿಗೆ ತಾಳಿಕಟ್ಟಿಸಿ, ಕಾಲುಂಗರಗಳನ್ನು ತೊಡಿಸಲಾಗುವದು. ಈಕೆ ದೇವರನ್ನೇ ಮದುವೆಯಾದವಳಾದ್ದರಿಂದ ಸಮಾಜದಲ್ಲಿ ಅವಳನ್ನು ಕೀಳೆಂದು ತಿಳಿದು ಕೊಳ್ಳಲಾಗುವದಿಲ್ಲ. ಸ್ತ್ರೀಯರು ತಮ್ಮ ಮುತ್ತೈದೆತನದ ಸಂಕೇತವಾದ ತಾಳಿಗಳನ್ನು ಅವಳಿಂದ ಪೋಣಿಸಿಕೊಳ್ಳುತ್ತಾರೆ. ದೇವರನ್ನೇ ಮದುವೆಯಾದ ಕಾರಣ ದಿಂದ ಬಸವಿಯರೆಂದೂ ವಿಧವೆಯರಾಗುವದಿಲ್ಲ. ಬಸವಿಯರ ಮುತ್ತೈದೆತನ ಅಮರವಾಗಿಯೇ ಉಳಿಯುತ್ತದೆ.

ಕರ್ನಾಟಕದ ಬಳ್ಳಾರಿ ಜಿಲ್ಲೆಯ ಒಬ್ಬ ಬ್ರಿಟಿಶ್ ಜಿಲ್ಲಾ- ಧಿಕಾರಿಗಳು ಬಸವಿ ಪದ್ಧತಿಯ ಬಗ್ಗೆ ಹೀಗೆ ಬರೆಯುತ್ತಾರೆ: ಹಿಂದುಗಳು ಮನೆಯಲ್ಲಿ ಯಾರಾದರೂ ತೀರಿಕೊಂಡರೆ ಬೀಜದ ಹೋರಿಯನ್ನು ದೇವಾಲಯಕ್ಕೆ ಬಸವಿ ಹೋರಿ ಎಂದು ಬಿಡು-

ತ್ತಾರೆ. ಅದರಂತೆ ಆಕಳುಗಳನ್ನು ಸಹಿತ ದೇವಾಲಯಕ್ಕೆ ಬಿಟ್ಟು ಬಸವಿ ಆಕಳು ಎಂದು ಕರೆಯುತ್ತಾರೆ. ಅದರಂತೆ ದೇವರ ಹೆಸರಿನಲ್ಲಿ ಬಸವಿ ಸ್ತ್ರೀಯರನ್ನು ಬಿಡುವದುಂಟು. ವಿಜಯನಗರದ ಅರಸರ ಕಾಲದಲ್ಲಿ ಬೋಯಾ ಜನರಲ್ಲಿ ಬಸವಿ ಸ್ತ್ರೀಯರನ್ನು ಬಿಡುವ ಪದ್ಧತಿ ಇತ್ತು. ಮತ್ತು ಅವರು ಯುದ್ಧಗಳಲ್ಲಿ ಗಾಯಾಳುಗಳ ಆರೈಕೆ ಮಾಡುತ್ತಿದ್ದರೆಂದು ತಿಳಿದು ಬರುತ್ತದೆ. ಆಗಿನ ಕಾಲದಲ್ಲಿ ದೇವಾಲಯುಗಳಿಗೆ ಹೊಂದಿದ ಹೆಚ್ಚಿನ ಬಸವಿ ಹೆಣ್ಣುಮಕ್ಕಳನ್ನು ಗಾಯಾಳುಗಳ ಆರೈಕೆ ಮಾಡಲಿಕ್ಕೆ ಒತ್ತಾಯದಿಂದ ಬಳಸಿಕೊಂಡಂತೆ ಕಾಣು ತ್ತದೆ. ಜಾತ್ರೆಗಳ ಸಂದರ್ಭದಲ್ಲಿ ದೇವರ ತೇರನ್ನು ಎಳೆ ಯುವದು ಬೋಯಾ ಜನರ ಕೆಲಸವಾಗಿದ್ದರೆ, ಆಗ ಅವರಿಗೆ ಆಹಾರ ಒದಗಿಸುವದು ಬಸವಿಯರ ಕೆಲಸವಾಗಿರುತ್ತಿತ್ತು.

ಬ್ರಿಟಿಷರ ಆಳಿಕೆಯ ೧೯ ನೆಯ ಶತಮಾನದ ಅಂತ್ಯದ ಕಾಲ ದಲ್ಲಿ ಬಸವಿಯರಾಗಲು ಪರವಾನಿಗೆ ಪಡೆಯಲು ಯುರೋಪಿ-ಯನ್ ಮ್ಯಾಜಿಸ್ಟ್ರೇಟರಿಗೆ ಅರ್ಜಿ ಸಲ್ಲಿಸಬೇಕೆಂದು ಬರೆದ ಈ ಕೆಳಕಂಡ ಅರ್ಜಿಗಳಿಂದ ಎಷ್ಟು ವರ್ಷದ ಹುಡುಗಿಯರು ಯಾವ ಯಾವ ಕಾರಣಕ್ಕೆ ಬಸವಿಯರಾಗಿದ್ದಾರೆಂದು ಕಂಡು ಬರುತ್ತದೆ. ೧೮ ವರ್ಷದ ನಾನು ಬಸವಿಯಾಗಬೇಕೆಂದು ಇಚ್ಛಿಸಿದ್ದೇನೆ. ನನ್ನ ಜಾತಿಯ ಪದ್ಧತಿಯ ಮೇರೆಗೆ ಗುರುಗಳಿಂದ ಮುದ್ರೆ ಹಾಕಿಸಿಕೊಳ್ಳಬೇಕೆಂದು ಇಚ್ಛಿಸುತ್ತೇನೆ. ಆದ್ದರಿಂದ ನನಗೆ ಮುದ್ರೆ ಹಾಕಿಸಿಕೊಂಡು ಬಸವಿಯಾಗಲು ಅಪ್ಪಣೆ ಕೊಡ ಬೇಕು.

ಮಂತ್ತೊಬ್ಬ ಸ್ತ್ರೀಯು ತನ್ನ ೧೨ ಮತ್ತು ೧೫ ವರ್ಷದ ಹೆಣ್ಣು ಮಕ್ಕಳಿಗೆ ಬಸವಿ ಬಿಡುವದಕ್ಕಾಗಿ ಈ ರೀತಿಯಾಗಿ ಅರ್ಜಿ ಹಾಕಿರುವದು ಕಂಡು ಬರುತ್ತದೆ. "ನನಗೆ ಗಂಡು ಸಂತಾನವಿಲ್ಲದ್ದರಿಂದ ನನ್ನ ಇಬ್ಬರು ಹೆಣ್ಣುಮಕ್ಕಳಿಗೆ ದೇವಾಲಯದಲ್ಲಿ ತಾಳಿ ಕಟ್ಟಿಸಬೇಕೆಂದು ಇಚ್ಛಿಸಿದ್ದೇನೆ. ಇದು ನಮ್ಮ ಗುರುಗಳ ಅಪ್ಪಣೆಯ ಮೇರೆಗೆ ಮತ್ತು ಜಾತಿಯ ಪದ್ಧತಿಯ ಪ್ರಕಾರ ಇರುತ್ತದೆ. ಆದ್ದರಿಂದ ನ್ಯಾಯಾಲಯವು ಇಬ್ಬರು ಹೆಣ್ಣುಮಕ್ಕಳಿಗೆ ತಾಳಿ ಕಟ್ಟಲಿಕ್ಕೆ ಪರವಾನಗಿ ಕೊಡಬೇಕೆಂದು ಬೇಡಿಕೊಳ್ಳುತ್ತೇನೆ".

ಮತ್ತೊಂದು ಅರ್ಜಿಯಲ್ಲಿ ೧೭ ಮತ್ತು ೧೯ ವರ್ಷದ ಹುಡುಗಿಯರು ತಮ್ಮ ತಂದೆ-ತಾಯಿಗಳು ಸತ್ತಿದ್ದಾರೆಂದೂ ತಮ್ಮ ಮನೆತನದ ಹೆಸರು ಉಳಿಸಲು ತಾವು ಬಸವಿಯಾಗ ಬೇಕೆಂದು ಇಚ್ಛಿಸುವದಕ್ಕೆ ಮತ್ತು ತಾಯಿಯ ಉದ್ಯೋಗವನ್ನು ಮುಂದುವರಿಸುವ ಪದ್ಧತಿಯನ್ನು ಆಚರಿಸಲು ಕೋರಿದರು.

ಡಬ್ಲ್ಯು. ಫ್ರಾನ್ಸಿಸ್ ಎಂಬ ಬಳ್ಳಾರಿ ಜಿಲ್ಲೆಯ ಆಂಗ್ಲ ಅಧಿಕಾರಿಯು ೧೯ ರಲ್ಲಿ ಬಸವಿ ಪದ್ಧತಿಯ ಬಗ್ಗೆ ಹೀಗೆ ಬರೆಯುತ್ತಾರೆ. "ಬಸವಿ ಬಿಡುವದು ಗಂಡು ಸಂತಾನವಿಲ್ಲದ ಸ್ತ್ರೀ-ಪುರುಷರು ಮಕ್ಕಳನ್ನು ದತ್ತಕ ತೆಗೆದುಕೊಳ್ಳುವ ಬದಲಾಗಿ ತಮ್ಮ ಒಬ್ಬ ಮಗಳನ್ನು ದೇವರ ಹೆಸರಿನಲ್ಲಿ 'ಬಸವಿ' ಬಿಟ್ಟು ಅವಳು ತಮ್ಮ ತಂದೆ-ತಾಯಿಗಳ ಆಸ್ತಿಯನ್ನು ಪಡೆಯುವದಕ್ಕೆ ಅನುವುಮಾಡಿಕೊಡುತ್ತಾರೆ. ಅಷ್ಟೇ ಅಲ್ಲ, ಮಗನಂತೆ ಅವಳು ಮದುವೆ ಆಗದೆ ತನ್ನ ತಂದೆ-ತಾಯಿಗಳ ಮನೆ

ಯಲ್ಲಿಯೇ ಉಳಿದುಕೊಳ್ಳುತ್ತಾಳೆ. ಅವಳು ತನ್ನ ಜಾತಿಯ ಇಲ್ಲವೆ ಮೇಲಿನ ಜಾತಿಯ ಯಾವುದೇ ಪುರುಷನ ಜೊತೆ ಸಮಾಗಮ ಹೊಂದಬಹುದು. ಆಕೆ ಮದುವೆ ಆಗುವದಿಲ್ಲ ವಾದ್ದರಿಂದ ಅವಳಿಗೆ ಹುಟ್ಟಿದ ಮಕ್ಕಳು ಅವಳ ತಂದೆಯ ಮನೆತನದ ಹೆಸರು ಮತ್ತು ಬೆಡಗನ್ನು (ಗೋತ್ರ) ಹೊಂದು-ತ್ತಾರೆ. ಆದರೆ ಅವರು ತಮ್ಮ ದೈಹಿಕ ಪಿತೃವಿನ ಸಂಗಡ ಯಾವದೇ ತರದ ಸಂಬಂಧವಿಡುವದಿಲ್ಲ. ಅವಳಿಗೆ ಕೇವಲ ಮಗಳು ಹುಟ್ಟಿದರೆ ಅವಳು ಕೂಡಾ ಮುಂದೆ ಬಸವಿ ಯಾಗುತ್ತಾಳೆ. ಬಸವಿಯರಿಗೆ ಹುಟ್ಟಿದ ಮಕ್ಕಳಿಗೆ ಅವರ ಸಮಾಜದಲ್ಲಿ ಯಾವದೇ ಕಳಂಕವಿರುವದಿಲ್ಲ. ಬಸವಿಯರು ಎಂದೂ ವಿಧವೆಯರಾಗುವದಿಲ್ಲವಾದ್ದರಿಂದ ಅವರಿಗೆ ತಮ್ಮ ಜಾತಿಯ ಮದುವೆಯ ಸಮಾರಂಭಗಳಲ್ಲಿ ಸದಾ ಸುಸ್ವಾಗತ ವಿರುತ್ತದೆ. ಬಸವಿಯರು ನೃತ್ಯಗಾರ್ತಿಯರಿಗಿಂತ (Dancing girls) ಭಿನ್ನವಾಗಿರುತ್ತಾರೆ. ಇವರು ವೇಶ್ಯಾ ವೃತ್ತಿಯನ್ನು ಬಹುತರವಾಗಿ ನಡೆಸುವದಿಲ್ಲ. ಬಸವಿಯರು ಸಾಮಾನ್ಯವಾಗಿ ಒಬ್ಬ ಪುರುಷನೊಡನೆ ಮಾತ್ರ ಇರುತ್ತಾರೆ. ಅವರು ಸ್ವೇಚ್ಛಾಚಾರದಲ್ಲಿ ತೊಡಗುವದಿಲ್ಲ. ಮತ್ತು ಅವಳು ತನ್ನ ಪುರುಷನಿಗೆ ವಿಧೇಯಳಾಗಿ ಉಳಿದು ಅವನ ಮನೆತನದ ಕೆಲಸಗಳನ್ನು ಉಳಿದವರಷ್ಟೇ ಅಭಿಮಾನದಿಂದ ಮಾಡಿ ಅವ ನಿಂದ ಹಣ ಪಡೆಯುತ್ತಾಳೆ. ಈ ಹಣವು ವಾರಕ್ಕೆ ಅಥವಾ ವರ್ಷಕ್ಕೆ ಇಂತಿಷ್ಟು ಎಂದು ನಿರ್ಧರಿಸಲ್ಪಡುತ್ತದೆ".

"ವರ್ಷಕ್ಕೊಮ್ಮೆ ನಡೆಯುವ ಊರ ಜಾತ್ರೆ ಇಲ್ಲವೆ ಹಬ್ಬ

ದಲ್ಲಿ ಬಸವಿಯರಿಗೆ ಉಡುಪುಗಳನ್ನು ಅಂದರೆ ಸೀರೆ–ಕುಪ್ಪಸ ಗಳನ್ನು ಕೊಡದಿದ್ದರೆ ಅವಳು ತಮ್ಮ ಸಂಗಾತಿಯನ್ನು ಒದಲಿ ಸುತ್ತಾರೆ. ಆದಕ್ಕಾಗಿ ನಾಗರಪಂಚಮೀಯಂಥ ಹಬ್ಬಗಳಲ್ಲಿ ಬಸವಿ ಯರಿಗೆ ಉಡುಗರೆ ಕೊಡುವದಕ್ಕಾಗಿ ಮನೆಮಾರಂಗಳಲ್ಲಿ ಕಳವುಗಳು ಹೆಚ್ಚಾಗುತ್ತವೆ. ಆಂದ್ರ ಪ್ರದೇಶದ ಕರ್ನೂಲ ಜಿಲ್ಲೆಯಲ್ಲಿಯೂ ಇಂಥ ಬಸವಿ ಪದ್ಧತಿ ಇದ್ದುದಾಗಿ ತಿಳಿಯು ತ್ತದೆ.”

ಬಳ್ಳಾರಿ ಜಿಲ್ಲೆಯ ಒಬ್ಬ ಮಾದಿಗನು ತನ್ನ ಚಿಕ್ಕ ವಯಸ್ಸಿನ ಮಗಳನ್ನು ದೇವರ ಮೂರ್ತಿಯೊಡನೆ ಮದುವೆ ಮಾಡಿ ಬಸವಿ ಎಂದು ಬಿಟ್ಟನು. ಆ ಬಸವಿಯು ವಿಧಿವತ್ತಾದ ಮದುವೆ ಯನ್ನು ಮಾಡಿಕೊಳ್ಳಲು ಅನರ್ಹವಾದದ್ದರಿಂದ ಸ್ವೇಚ್ಛಾಚಾರಿ ಯಾದಳು. ಅವಳ ಗಂಡುಮಕ್ಕಳು ಅವಳ ತಂದೆಯ ಆಸ್ತಿಗೆ ಹಕ್ಕುದಾರರಾದರು. ಈ ಹಕ್ಕುದಾರಿಕೆಯನ್ನು ನ್ಯಾಯಾಲಯ ದಲ್ಲಿ ಪ್ರಶ್ನಿಸಿದಾಗ ನ್ಯಾಯಾದೀಶರು “ಅವಳು ದೇವದಾಸಿ ಯಾಗಿದ್ದರೂ ವೇಶ್ಯಾವೃತ್ತಿಯಿಂದ ಹಣ ಗಳಿಸುವದು ಅವಳ ವೃತ್ತಿಯಾಗಿರುವದಿಲ್ಲ” ಎಂದು ಹೇಳಿದರು. ಇದರಿಂದ ಬಸವಿ ಯರಿಗೆ ಸ್ವೇಚ್ಛಾಚಾರ ಮಾಡುವ ಹಕ್ಕು ಇತ್ತು ಎಂದೂ ಆದರೆ ಹಣಕ್ಕಾಗಿ ವ್ಯಭಿಚಾರ ಮಾಡುವ ಹಕ್ಕು ಅವರಿಗೆ ಇರ ಲಿಲ್ಲ ಎಂದು ಸ್ಪಷ್ಟವಾಗುತ್ತದೆ.

ಹಿಂದೂಕಾಯ್ದೆಯ ಪ್ರಕಾರ ದೇವದಾಸಿಯರು ಮಾತ್ರ ದತ್ತಕ ತೆಗೆದುಕೊಂಡು ಅವರನ್ನು ದೇವದಾಸಿಯರನ್ನಾಗಿ ಮಾಡಬಹುದು. ಆದರೆ ಬೇರೆ ವರ್ಗದವರಿಗೆ ಗಂಡು

ಮಕ್ಕಳನ್ನು ಮಾತ್ರ ದತ್ತಕ ತೆಗೆದುಕೊಳ್ಳಲಿಕ್ಕೆ ಅವಕಾಶವಿದೆಯೇ ಹೊರತು ಹೆಣ್ಣುಮಕ್ಕಳನ್ನು ದತ್ತಕ ತೆಗೆದುಕೊಳ್ಳಲಿಕ್ಕೆ ಬರುವದಿಲ್ಲ. ಹಿಂದೆ ಇದು ಮದ್ರಾಸ ಮತ್ತು ಪಶ್ಚಿಮ ಭಾರತದ ನ್ಯಾಯಾಲಯಗಳಲ್ಲಿ ಮನ್ನಣೆ ಪಡೆದಿರುವದಾದರೂ ಕಲಕತ್ತೆ ಮತ್ತು ಮುಂಬಯಿ ನ್ಯಾಯಾಲಯಗಳಲ್ಲಿ ಮನ್ನಿಸಲ್ಪಟ್ಟಿರಲಿಲ್ಲಿ. ಇಂದು ಎಲ್ಲಾ ತರಹದ ದೇವದಾಸಿ ಪದ್ಧತಿಗಳನ್ನು ನಿಷೇಧಿಸಿರುವದರಿಂದ ದೇವದಾಸಿಯಾಗುವದು ಅಪರಾಧವಾಗುತ್ತದೆ.

## ಮಧ್ಯ ಕರ್ನಾಟಕದಲ್ಲಿ ದೇವದಾಸಿಪದ್ಧತಿ

೧೯೨೪ ರಲ್ಲಿ ತಾವ್ನೆ (Tawney) ಎಂಬ ವಿದ್ವಾಂಸರು ಸೋಮದೇವರ ಕಥಾಸಾಗರ ಸರಿತ್ಸಾಗರವನ್ನು ಭಾಷಾಂತರಿಸಿದಾಗ ದೇವದಾಸಿ ಪದ್ಧತಿಯನ್ನು "ಪವಿತ್ರ ವೇಶ್ಯಾಪದ್ಧತಿ" ಎಂದು ಕರೆದರು. ಅವರ ವಿಚಾರಣೆಯ ಪ್ರಕಾರ ದೇವದಾಸಿಯರು ದಕ್ಷಿಣ ಮಧ್ಯ ಮತ್ತು ಪಶ್ಚಿಮ ಭಾರತದಲ್ಲಿ ಹಿಂದೂ ದೇವಾಲಯಗಳಲ್ಲಿ ಮಾತ್ರವಲ್ಲದೆ ಜೈನರ ಬಸದಿಗಳಲ್ಲಿಯೂ ಮತ್ತು ಬೌದ್ಧರ ಪಗೋಡಾಗಳಲ್ಲಿಯೂ ಇರುತ್ತಿದ್ದರು. ಗುಜರಾತದ ಸೋಮನಾಥ ದೇವಾಲಯದಲ್ಲಿ ಇಂಥ ನೂರಾರು ದೇವದಾಸಿಯರನ್ನು ನೇಮಿಸಲಾಗಿತ್ತು. ೧೯೨ನೇ ಇಸ್ವಿಯಲ್ಲಿಯ ಕರ್ನಾಟಕದ ಒಂದು ಶಾಸನವು ಇಂಥ ದೇವದಾಸಿಯರು ದೇವಾಲಯಗಳಲ್ಲಿ ಜನಪ್ರಿಯರಾಗಿದ್ದುದರ ಬಗ್ಗೆ

ಹೇಳುತ್ತದೆ. ೧೦ನೆಯ ಶತಮಾನದ ಶಾಸನದಂತೆ ಕರ್ನಾಟಕದಲ್ಲಿ ಪಾತ್ರದವರು, ದಾಸಿಯರು, ಮತ್ತು ಬಸವಿಯರು ಧಾರ್ಮಿಕ ವಿಧಿಗಳಲ್ಲಿ ಭಾಗವಹಿಸುತ್ತಿದ್ದರೆಂದು ತಿಳಿದು ಬರುತ್ತದೆ, ದೇವಾಲಯಗಳಲ್ಲಿ ನೃತ್ಯ ಮಾಡುವದು ಮತ್ತು ಹಾಡುವದು ಪಾತ್ರದವರ (Dancing girls) ಮುಖ್ಯ ಕೆಲಸಗಳಾಗಿದ್ದವು. ಬ್ರಿಟೀಷ ಸರಕಾರವು ದೇವದಾಸಿ ಪದ್ಧತಿಗೆ ಪ್ರೋತ್ಸಾಹನೆಯನ್ನು ಕೊಡದಿದ್ದರೂ ಅದನ್ನು ನಿಶೇಧಿಸುವ ಗೊಡವೆಗೆ ಹೋಗಲಿಲ್ಲ. ಏಕೆಂದರೆ ಈ ಪದ್ಧತಿಯು ಧಾರ್ಮಿಕ ಸಂಸ್ಥೆಗಳಿಗೆ ಒಳಪಟ್ಟಿತ್ತು. ಮತ್ತು ಬ್ರಿಟಿಷರಿಗೆ ಭಾರತದಲ್ಲಿ ಧಾರ್ಮಿಕ ಸಂಸ್ಥೆಗಳ ಚಟುವಟಿಕೆಗಳಲ್ಲಿ ಕೈ ಹಾಕುವದು ಬೇಕಾಗಿರಲಿಲ್ಲ.

ಭಾರತವು ಸ್ವತಂತ್ರವಾದ ಕೂಡಲೆ ಎಲ್ಲಾ ತರಹದ ವೇಶ್ಯಾವೃತ್ತಿಯು ಸಾಮಾಜಿಕ ಕೆಡುಕು (Social evil) ಎಂದು ಬಗೆದು ಅದನ್ನು ನಿರ್ನಾಮ ಮಾಡಲು ಯೋಚಿಸಿತ್ತು. ಆದ್ದರಿಂದ ೧೯೪೯ ರಲ್ಲಿ ಭಾರತವು ನ್ಯೂಯಾರ್ಕ ನಗರದಲ್ಲಿ ಅಂತರ್ ರಾಷ್ಟ್ರೀಯ ವೇಶ್ಯಾವೃತ್ತಿ ತಡೆಯುವ ನಿಯಮಗಳಿಗೆ ಸಹಿ ಹಾಕಿತು. ಮತ್ತು ೧೯೫೬ ನೆಯ ಇಸ್ವಿಯಲ್ಲಿ ಭಾರತ ಸರಕಾರವು ವಿವಿಧ ಬಗೆಯ ವೇಶ್ಯಾವೃತ್ತಿಯನ್ನು ತಡೆಯುವ ಕಾನೂನನ್ನು ಮಾಡಿತು. ಇದು ಸ್ಪಷ್ಟವಾಗಿ ದೇವದಾಸಿಯರಿಗೂ ಮತ್ತು ವೇಶ್ಯೆಯರಿಗೂ ಅನ್ವಯಿಸುತ್ತದೆ. ದೇವದಾಸಿ, ಜೋಗತಿ ಮತ್ತು ಬಸವಿ ಪದ್ಧತಿಗಳು ಭಾರತದಲ್ಲಿ ವೇಶ್ಯಾವೃತ್ತಿಯನ್ನು ಉಲ್ಬಣಗೊಳಿಸುವಂತಹ ಪರಂಪರೆಯ

ಸಂಸ್ಥೆಗಳಾಗಿದ್ದು ದೇವಾಲಯಗಳು ಇಂಥ ಕೆಟ್ಟ ಪರಂಪರೆಗೆ ಆಶ್ರಯ ನೀಡಿದ್ದರಿಂದ ದೇವದಾಸಿ ಪದ್ಧತಿಯನ್ನು ಕಾನೂನು ಗಳಿಂದ ನಿಷೇಧಿಸಲಾಯಿತು. ದೇವದಾಸಿ ಪದ್ಧತಿಯು ಕಾನೂನಿನ ಮೇರೆಗೆ ಪ್ರತಿಬಂಧಿತವಾಗಿದ್ದರೂ ಸಮಾಜದಲ್ಲಿ ಅನೇಕ ವರ್ಗಗಳ ಜನರು ಅದನ್ನು ಘೋಷಿಸುತ್ತಿರುವುದರಿಂದ ಜೋಗತಿ, ದೇವದಾಸಿ, ಮತ್ತು ಬಸವಿ ಪದ್ಧತಿಗಳು ಇನ್ನೂ ರೂಢಿಯಲ್ಲಿ ಉಳಿದಿವೆ. ಡಾ. ಕೆ. ಜಿ, ಗುರುಮೂರ್ತಿಯವರು ಮಧ್ಯಕರ್ನಾಟಕದಲ್ಲಿ ಬೇಸಾಯದ ಮೂರು ಹಳ್ಳಿಗಳಲ್ಲಿ ಮಾಡಿದ ಅಭ್ಯಾಸದಿಂದ ಅಲ್ಲಿ ಮುಖ್ಯವಾಗಿ ಮಾದರು, ತಳ ವಾರರು, ಅಗಸರು, ಕಬ್ಬೇರರು, ಮತ್ತು ಕುರುಬರಲ್ಲಿ ಬಸವಿ ಬಿಡುವ ಪದ್ಧತಿ ಇದೆ ಎಂದು ತಿಳಿದು ಬರುತ್ತದೆ. ಬಸವಿಯ ರನ್ನು ದೇವತೆಯರಿಗೂ ಅರ್ಪಿಸುವ ಪದ್ಧತಿ ಮೇಲೆ ಕಾಣಿಸಿದ ಎಲ್ಲಾ ಜಾತಿಯವರಲ್ಲಿಯೂ ಕಂಡು ಬರುತ್ತದೆ. ಮಧ್ಯ ಕರ್ನಾಟಕದ ಈ ಮೂರು ಹಳ್ಳಿಗಳಲ್ಲಿ ಮೂರು ಬಗೆಯ ದೇವ ದಾಸಿಯರು ಇರುವದಾಗಿ ತಿಳಿಯುತ್ತದೆ. ಅವರು :

೧) ದೇವಾಲಯದ ದೇವದಾಸಿಯರು, ೨) ದೇವದಾಸಿಯರು ಮತ್ತು ೩) ಬಸವಿಯರು.

**೧. ದೇವಾಲಯದ ದೇವದಾಸಿಯರು :** ಈ ಪದ್ಧತಿಯ ಪ್ರಕಾರ ದೇವದಾಸಿಯರಾದವರು ತಮ್ಮ ಸಹೋದರರ ಮಗಳಿಗೆ ತಮ್ಮ ಆಸ್ತಿಯ ಹಕ್ಕನ್ನು ಮುಂದುವರಿಸುವ ಅಧಿಕಾರವನ್ನು ಕೊಡುತ್ತಾರೆ. ಮಕ್ಕಳು ದೇವರ ಮಕ್ಕಳೆ ಆದ್ದರಿಂದ ಅವರನ್ನು ದೇವರಿಗೆ ಮದುವೆಯಾಗಿಸಲು ಬರುವ

ದಿಲ್ಲ. ದೇವದಾಸಿಯರು ಇಂಥಹ ಹುಡುಗಿಯನ್ನು ಆರಿಸಿ ಆಕೆಯನ್ನು ದೇವರಿಗೆ ಅರ್ಪಿಸುವ ವ್ಯವಸ್ಥೆ ಮಾಡುತ್ತಾರೆ. ದೇವದಾಸಿಯಾಗುವ ಹುಡುಗಿ ಕನ್ಯೆಯಾಗಿರಬೇಕು. ಆದ್ದರಿಂದ ದೇವದಾಸಿಯನ್ನಾಗಿ ಮಾಡಲು ಆರಿಸಲ್ಪಡುವ ಹುಡುಗಿಯ ಕೌಮಾರ್ಯವನ್ನು ಕಾಪಾಡುವಲ್ಲಿ ಜಾತಿಯ ಹಿರಿಯರು ಮತ್ತು ಹಿರಿಯ ದೇವದಾಸಿಯರು ಲಕ್ಷ್ಯ ವಹಿಸುತ್ತಾರೆ. ಇದನ್ನು ಅಲಕ್ಷ್ಯಮಾಡುವ ಹುಡುಗಿಯರನ್ನು ಮತ್ತು ಹುಡುಗರನ್ನು ಜಾತಿಯಿಂದ ಹೊರಹಾಕಲಾಗುವದು. ಮುಂದೆ ಹುಡುಗಿಯರು ದೇವದಾಸಿಯ ದೀಕ್ಷೆ ಪಡೆಯುವಾಗ ತಮ್ಮ ಕೌಮಾರ್ಯ ಭಂಗ ಮಾಡುವ ಪುರುಷನನ್ನು ಅವರೇ ಅಥವಾ ಆಕೆಯ ಹಿರಿಯರು ಗೊತ್ತು ಮಾಡುತ್ತಾರೆ. ಈ ದೀಕ್ಷಾ ಸಮಾರಂಭವು ಸಾಮಾನ್ಯವಾಗಿ ಮದುವೆಯ ಸಮಾರಂಭದಂತೆಯೇ ನಡೆಯುತ್ತದೆ. ಆದರೆ ದೇವರಿಗೆ ಅವಳನ್ನು ಅರ್ಪಿಸುವದರಿಂದ ಇಲ್ಲಿ ಮದುಮಗನಿರುವದಿಲ್ಲ. ಇಷ್ಟದೇವರ ಪೂಜಾರಿಯೇ ದೇವರ ಪರವಾಗಿ ಆಕೆಗೆ ಮಂಗಳ ಸೂತ್ರವನ್ನು ಕಟ್ಟುತ್ತಾನೆ. ನಂತರ ಹುಡುಗಿಯನ್ನು ಹಿರಿಯ ದೇವದಾಸಿಯ ಮನೆಗೆ ಕರೆದುಕೊಂಡು ಹೋಗಿ "ನೀರು ಹೊರಿಸುವ ಮತ್ತು ಹೆಣ್ಣುಮಾಡುವ ವಿಧಿ" ಯನ್ನು ಆಚರಿಸಲಾಗುವದು. ಆಕೆಗೆ ಅಂದು ರಾತ್ರಿ ಕೌಮಾರ್ಯ ಭಂಗ ಮಾಡುವ ಪುರುಷನು ಅವಳೊಡನೆ ಮೊದಲ ಸಲ ಸಮಾಗಮ ಮಾಡುವನು. ನಂತರ ಅವಳು ಅವನೊಡನೆ ಕೂಡಿಕೊಂಡಿರಬಹುದು, ಗುಡಿದೇವದಾಸಿಗೆ ಅನೇಕ ಪಕ್ಕಾ

ಗಳು ಇವೆ. ಉದಾ : ೧) ಇವುಗಳಲ್ಲಿ ತಾನು ದೀಕ್ಷೆ ಪಡೆದ ದೇವರ ಗುಡಿಯನ್ನು ಸ್ವಚ್ಛವಾಗಿಡುವದು. ೨) ಆ ದೇವರ ಗುಡಿಯ ಇನ್ನಿತರ ಕೆಲಸಗಳಲ್ಲಿ ನೆರವಾಗುವದು, ಇತ್ಯಾದಿ.

೨. **ದೇವದಾಸಿಯರು** : ಇವರು ದೇವಾಲಯದ ದೇವದಾಸಿಯರಿಗಿಂತ ಕೆಳದರ್ಜೆಯವರು. ಇವರು ಕುಮಾರಿಯರಾಗಿರಬೇಕೆಂಬ ನಿಯಮವಿಲ್ಲ. ದೀಕ್ಷಾ ಸಮಾರಂಭವು ದೇವಾಲಯದ ದೇವದಾಸಿಯರಂತೆ ನಡೆಯುವುದಾದರೂ ಇವರು ದೇವಾಲಯದ ದೇವದಾಸಿಯರ ಸಹಾಯಕರಂತೆ ಇರುತ್ತಾರೆ. ದೇವರ ವಾರ್ಷಿಕ ಜಾತ್ರೆಯ ಕಾಲದಲ್ಲಿ ದೇವರ ಜಾತ್ರೆಗೆ ವಿಧಿವತ್ತಾಗಿ ಓಕಳಿ ಆಡುವದರಲ್ಲಿ ಪಾಲ್ಗೊಳ್ಳುತ್ತಾರೆ. ದೇವರ ಪರವಾಗಿ ಊರಿನ ಕೆಲವು ಜಾತಿಗಳಿಗೆ ಸೇರಿದ ಜನರು ಮಾತ್ರ ಇವರ ಮೇಲೆ ಓಕಳಿ ಚೆಲ್ಲುವ ಅವಕಾಶ ಪಡೆಯುತ್ತಾರೆ. ಆಗ ದೇವದಾಸಿಯರು ಇವರಿಂದ ತಪ್ಪಿಸಿಕೊಳ್ಳಲು ಕಣಿಗಲ ಗಿಡದ ಟೊಂಗೆಗಳಿಂದ ಹೊಡೆಯುತ್ತಾರೆ. ಈ ಬಗೆಯ ದೇವದಾಸಿಯರು ಯಾರಾದರೂ ಪರಪುರುಷನೊಡನೆ ಅವನ ಹೆಂಡತಿಯಂತೆ, ಇಲ್ಲವೆ ಉಪಪತ್ನಿಯಂತೆ ಇರಬಹುದು. ಆಗಲೆ ಮದುವೆ ಗೊತ್ತು ಮಾಡಿದ ಹುಡುಗೆಯರನ್ನು (betrothed) ದೇವರಿಗೆ ದೇವದಾಸಿ ಮಾಡಿದಾಗ ಅವಳು ಆ ಹುಡುಗನಿಗೆ ಹೊಂದಿಕೊಂಡಿರಬೇಕೆಂದು ತಿಳಿಸುವರು.

೩. **ಬಸವಿಯರು** : ಒಂದು ಕುಟುಂಬದಲ್ಲಿ ಗಂಡುಮಗ ನಿಲ್ಲದಿದ್ದರೆ ಗಂಡುಸಂತಾನಕ್ಕಾಗಿಯೇ ದೇವದಾಸಿಯಾಗಿ ಮಾಡಿ

ಗಂಡುಸಂತಾನ ಪಡೆದು ತಮ್ಮ ವಂಶವನ್ನು ಮುಂದುವರಿಸಿ ಕೊಳ್ಳುತ್ತಾರೆ. ಅವಳು ತನಗೆ ಬೇಕಾದ ಯಾವದೇ ಪುರುಷ ನೊಂದಿಗೆ ಸಮಾಗಮ ಮಾಡಬಹುದು. ಆದರೆ ಆಕೆ ತನ್ನ ಮನೆಯನ್ನು ಮತ್ತು ಊರನ್ನು ಬಿಡಕೊಡದು. ತನ್ನ ಬಳಗದವರೊಡನಷ್ಟೇ ಲೈಂಗಿಕ ಸಂಬಂಧ ಹೊಂದುವ ಅವಳಿಗೆ 'ಬಳಗದ ಬಸವಿ' ಎಂದೂ ತನ್ನ ಊರಲ್ಲಿನವರೊಡನೆ ಕೂಡಿಕೊಂಡರೆ 'ಊರ ಬಸವಿ' ಎಂದೂ ಕರೆಯುತ್ತಾರೆ. ಅವಳ ಮಕ್ಕಳು ತನ್ನ ತಾಯಿಯ ವಂಶಕ್ಕೆ ಸಂಬಂಧ ಹೊಂದುತ್ತಾರೆಯೇ ಹೊರತು ಜನಕ ತಂದೆಯ ವಂಶಕ್ಕೆ ಸಂಬಂಧಿಕರಾಗುವದಿಲ್ಲ. ಮಕ್ಕಳಿಲ್ಲದ ಚಿಕ್ಕ ವಿಧವೆಯರನ್ನು ಬಸವಿಯರನ್ನಾಗಿ ಬಿಡಬಹುದು. ಅವರಿಗೆ ಬಸವಿಯರಾಗುವ ದೀಕ್ಷೆಯನ್ನು ಗುಡಿಗಳಲ್ಲಿ ಕೊಡದೆ ಮನೆಯಲ್ಲಿಯೇ ಕೊಡ ಲಾಗುವದು. ಅನೇಕ ಬಸವಿಯರು ವೇಶ್ಯಾವೃತ್ತಿಗೆ ಇಳಿದ ಪ್ರಸಂಗಗಳು ಕಂಡು ಬಂದಿವೆ.

ಲೇಖಕರು ಮಾಡಿದ ಒಂದು ಅಧ್ಯಯನದಲ್ಲಿ ಮಧ್ಯ-ಕರ್ನಾಟಕದಲ್ಲಿ ಅನೇಕ ಹರಿಜನ ಜಾತಿಗಳಲ್ಲಿ ಮುಖ್ಯವಾಗಿ ಮಾದಿಗರು, ಹೊಲೆಯರು, ಚಲವಾದಿಗಳು ಮತ್ತು ಹುಲಿ ಸವಾರರು ಬಸವಿ ಬಿಡುವ ಪದ್ಧತಿಯನ್ನು ಅನುಸರಿಸುತ್ತಾರೆ. ಬಸವಿಗೆ ಅನೇಕ ಧಾರ್ಮಿಕ ಮತ್ತು ಸಾಮಾಜಿಕ ಹಕ್ಕುಗಳನ್ನು ಕೊಡಲಾಗಿರುವುದು ಕಂಡು ಬರುತ್ತದೆ. ಅವುಗಳಲ್ಲಿ ಮುಖ್ಯ ವಾದವುಗಳೆಂದರೆ : ೧. ಸ್ಪೃಶ್ಯರಿಂದ ಮತ್ತು ಅಸ್ಪೃಶ್ಯರಿಂದ ನಡೆಸುವ ಜಾತ್ರೆಗಳ ಕಾಲದಲ್ಲಿ ಮೆರವಣಿಗೆಯಲ್ಲಿ ಮತ್ತು

ಪೂಜೆಯ ಕಾಲದಲ್ಲಿ ಪವಿತ್ರ ದೀಪವನ್ನು (ಆರತಿಯನ್ನು) ಹೊತ್ತೊಯ್ಯುವದು ಮತ್ತು ಬೆಳಗಿಸುವದು; ೨. ಪೂಜಾರಿಗಳಂತೆ ತಮ್ಮ ಜಾತಿಯ ದೇವಾಲಯಗಳಲ್ಲಿ ಕೆಲಸ ಮಾಡುವದು ಮತ್ತು ದೇವಾಲಯಗಳನ್ನು ಸ್ವಚ್ಛವಾಗಿಡುವದು; ಅಲ್ಲದೆ ಪೂಜೆಯ ಕಾಲದಲ್ಲಿ ಹಾಡುಗಳನ್ನು ಹೇಳುವದು; ೩. ಬಸವಿಯರಿಗೆ ಸ್ಪೃಶ್ಯರ ಮತ್ತು ಅಸ್ಪೃಶ್ಯರ ಸಮಾಜದಲ್ಲಿ ಮುತ್ತೈದೆಯರ ಸ್ಥಾನವನ್ನು ಕೊಡಲಾಗುವದು. ಯಾಕೆಂದರೆ ಅವರೆಂದೂ ವಿಧವೆಯರಾಗುವದಿಲ್ಲ; ೪. ಎಷ್ಟೋ ಊರುಗಳಲ್ಲಿ ಕಾಮನ ಹಬ್ಬದಲ್ಲಿ ಕಾಮದಹನಕ್ಕಾಗಿ ಬೆಂಕಿ ಕೊಡುವವರು ಇಂಥಹ ಬಸವಿಯರೇ ಆಗಿದ್ದಾರೆ. ಅಷ್ಟೇ ಅಲ್ಲದೆ ಅವರು ಕಾಮನ ಹಬ್ಬದಲ್ಲಿ ಕಾಮಕೇಳಿಯ ಹಾಡುಗಳನ್ನು ಹೇಳುತ್ತಾರೆ. ಒಮ್ಮೊಮ್ಮೆ ಸ್ಪೃಶ್ಯ ಸಮಾಜದವರು ಬಸವಿಯರನ್ನು ಕರೆಯಿಸಿ ಇಂಥ ಹಾಡುಗಳನ್ನು ಹೇಳಿಸುತ್ತಾರೆ.

ಈಗ ಹರಿಜನರಲ್ಲಿ ಸಹಿತ ಬಸವಿ ಬಿಡುವ ಪದ್ಧತಿಯು ಬಹಳ ಕಡಿಮೆಯಾಗುತ್ತಿದೆ. ಇಂಥ ಬಸವಿಯರನ್ನು ಶಹರಗಳಿಗೆ ಕರೆದುಕೊಂಡು ಹೋಗಿ ವೇಶ್ಯಾವೃತ್ತಿಗೆ ಎಳೆಯುವ ಅನೇಕ ಉದಾಹರಣೆಗಳೂ ಉಂಟು.



## ಉಪ ಸಂಹಾರ

ಈಗಿನ ಬೆಳಗಾವಿ ಜಿಲ್ಲೆಯ ಸೌದತ್ತಿ ಎಂದು ಕರೆಯುವ ಊರಿನ ಪೂರ್ವ ಭಾಗದಲ್ಲಿ ಸುಮಾರು ೩ ಕಿಲೋ ಮೀಟರ ಪೂರ್ವಕ್ಕೆ ಎಲ್ಲಮ್ಮನ ಗುಡ್ಡವಿದೆ. ಅಲ್ಲಿಯ ಎಲ್ಲಮ್ಮನ ದೇವಸ್ಥಾನವು ಶಿಲ್ಪಕಲೆ ಮತ್ತು ಪೌಳಿಯಿಂದ ಕೂಡಿದ್ದು ಜಮದಗ್ನಿ ಮತ್ತು ಪರಶುರಾಮರ ಗುಡಿಗಳು ಸಹಿತ ಶಿಲ್ಪ ಕಲೆಗಳಿಂದ ಕಂಗೊಳಿಸುತ್ತವೆ. ಈಗ ಸೌದತ್ತಿಯಿಂದ ಎಲ್ಲಮ್ಮನ ಗುಡ್ಡಕ್ಕೆ ಸಾಕಷ್ಟು ಬಸ್ಸುಗಳು ಹೋಗುತ್ತಿರುವದ ರಿಂದ ಯಾತ್ರಿಕರು ಸುಲಭವಾಗಿ ಎಲ್ಲಮ್ಮನ ಗುಡ್ಡದವರೆಗೆ ಹೋಗಬಹುದು. ಯಾತ್ರಿಕರು ಉಳಿದುಕೊಳ್ಳಲಿಕ್ಕೆ ಸಾಕಷ್ಟು ವಿಶ್ರಾಮ ಧಾಮಗಳನ್ನೂ ಕಟ್ಟಿಸಲಾಗಿದೆ. ಆದರೆ ಜಾತ್ರೆಯ ಕಾಲಕ್ಕೆ ಬರುವ ಜನಸಾಮಾನ್ಯರು ಹೆಚ್ಚಾಗಿ ತಮ್ಮ ಚಕ್ಕಡಿ ಅಥವಾ ಬಂಡಿಗಳೊಡನೆ ಗುಡ್ಡದ ಕೆಲವು ಭಾಗಗಳಲ್ಲಿ ತಂಗುವದೇ ಹೆಚ್ಚು. ಅವರು ತಮ್ಮ ಅಡಿಗೆ ಮತ್ತು ಊಟ ಗಳನ್ನು ತಮ್ಮ ವಾಹನಗಳ ಹತ್ತಿರವೇ ಮಾಡಿಕೊಳ್ಳುತ್ತಾರೆ.

ಭಕ್ತರ ಸಮುದಾಯದಲ್ಲಿ ಅನೇಕರು ವಿವಿಧ ಬಗೆಯ ಕಾಣಿಕೆಗಳನ್ನು ಎಲ್ಲಮ್ಮನಿಗೆ ಅರ್ಪಿಸುತ್ತಾರೆ. ಕೆಲವರು ಕೇವಲ ಹಿಟ್ಟು ಧಾನ್ಯಗಳನ್ನು ಕೊಟ್ಟರೆ ಮತ್ತೆ ಕೆಲವರು ಬೆಳ್ಳಿ, ಬಂಗಾರ, ಮುತ್ತು ಮತ್ತು ರತ್ನಗಳ ಬೆಲೆ ಬಾಳುವ ಸಾಮಗ್ರಿ

ಗಳನ್ನು ಕಾಣಿಕೆ ಕೊಡುವದುಂಟು. ಮೊದಲು ಇದೆಲ್ಲವೂ ಪೂಜಾರಿ ವರ್ಗಕ್ಕೆ ಸೇರುತ್ತಿತ್ತು. ಅನಂತರ ಸೌದತ್ತಿ ನಗರ ಸಭೆಯವರು ಕಾಣಿಕೆಯಲ್ಲಿಯ ಕೆಲವು ಭಾಗವನ್ನು ಪಡೆಯಲಿಕ್ಕೆ ಪ್ರಾರಂಭಿಸಿದರು. ಏಕೆಂದರೆ ನಗರ ಸಭೆಯವರು ಎಲ್ಲಮ್ಮನ ಗುಡ್ಡದಲ್ಲಿ ವಸತಿ ಮತ್ತು ಆರೋಗ್ಯ ಮುಂತಾದ ವ್ಯವಸ್ಥೆಗಳನ್ನು ಮಾಡಬೇಕಾಗುತ್ತಿತ್ತು. ಮುಂದೆ ರೇಣುಕಾ-ಎಲ್ಲಮ್ಮ ದೇವಸ್ಥಾನದ ವಿಶ್ವಸ್ಥ ಸಮಿತಿ (Trust) ತಯಾರಾಯಿತು, ಅದೂ ಸಾಲದೆ ಈಗ ಕರ್ನಾಟಕ ಸರಕಾರವು ಅಸಿಸ್ಟಂಟ ಕಮಿಶನರ ದರ್ಜೆಯ ಒಬ್ಬ ಅಧಿಕಾರಿಯನ್ನು ದೇವಸ್ಥಾನದ ಆಡಳಿತಾಧಿಕಾರಿ ಎಂದು ನೇಮಿಸಿದೆ.

ಸೌದತ್ತಿ ಎಲ್ಲಮ್ಮ ದೇವಸ್ಥಾನದ ಪೂಜಾರಿ ವರ್ಗದಲ್ಲಿಯ ಅನೇಕ ಮನೆತನಗಳು ದೇವಸ್ಥಾನದ ಹತ್ತಿರವೇ ನೆಲೆಯೂರಿವೆ. ಈ ಪೂಜಾರಿ ವರ್ಗದವರು ಲಿಂಗಾಯತ ಬಣಜಿಗ ಜಾತಿಯವರಾಗಿದ್ದು, ಇವರು ತಮ್ಮ ವಂಶಾವಳಿಯನ್ನು ಎಲ್ಲಮ್ಮ ಸಮಕಾಲೀನತೆಯನ್ನು ತೋರಿಸುವಂತೆ ಹೇಳಿ ಕೊಳ್ಳುತ್ತಾರೆ.

ಇತಿಹಾಸಕಾರರು ಸೌದತ್ತಿಯಲ್ಲಿ ಕಾರ್ತ್ಯವೀರನೆಂಬ ರಾಜನು ಸುಮಾರು ಕ್ರಿ. ಶ. ೯ ನೆಯ ಶತಮಾನದಲ್ಲಿ ಆಳಿದನೆಂದು ಹೇಳುತ್ತಾರೆ. ಅನೇಕ ಪುರಾಣಗಳು ಜಮದಗ್ನಿಯು ಗೋದಾವರೀ ನದಿಯ ತೀರದಲ್ಲಿ ಇರುತ್ತಿದ್ದನೆಂದು ವರ್ಣಿಸುತ್ತವೆ. ರೇಣುಕೆ, ಜಮದಗ್ನಿ ಮತ್ತು ಪರಶುರಾಮರ ಪಂಥಗಳು ಇಡೀ ಭಾರತದ ತುಂಬಾ ಹಬ್ಬಿಕೊಂಡಿರುವದರಿಂದ

ಮಲಪ್ರಭಾ ನದಿಯ ತೀರದ ಈ ಎಲ್ಲಮ್ಮನ ಗುಡ್ಡದಲ್ಲಿ ಪೌರಾಣಿಕ ಸಂಗತಿಗಳು ನಡೆದವೆಂದು ಹೇಳುವದು ಸತ್ಯಕ್ಕೆ ದೂರವಾಗಬಹುದು. ಆದರೆ ಇಂತಹ ಎಲ್ಲಮ್ಮ ದೇವಸ್ಥಾನಗಳು ಮಧ್ಯ ಪ್ರದೇಶ, ಮಹಾರಾಷ್ಟ್ರ, ಕರ್ನಾಟಕ, ಆಂಧ್ರ ಪ್ರದೇಶ ಮುಂತಾದ ರಾಜ್ಯಗಳಲ್ಲಿ ಹಬ್ಬಿಕೊಂಡಿರುವದರಿಂದ ಗೋದಾವರೀ ತೀರದ ಎಲ್ಲಮ್ಮನ ಸಂಪ್ರದಾಯವೇ ಭಾರತ ತುಂಬಾ ಹಬ್ಬಿರಲಿಕ್ಕೆ ಸಾಕು. ಇಷ್ಟೇ ಅಲ್ಲ ಪುರಾಣ ಕತೆಗಳ ಪ್ರಕಾರ ಎಲ್ಲಮ್ಮನು ಕಾಶ್ಮೀರದ ಕ್ಷತ್ರಿಯ ರಾಜನ ಪುತ್ರಿ. ಜಮದಗ್ನಿ ಒಬ್ಬ ಬ್ರಾಹ್ಮಣ ಋಷಿ.

ಈಗ ಮಾತ್ರ ಈ ಎಲ್ಲಮ್ಮನ ದೇವಸ್ಥಾನಕ್ಕೆ ಮಹಾರಾಷ್ಟ್ರದ ಮುಂಬೈ ನಗರದಿಂದ ಹಿಡಿದುಕೊಂಡು ದಕ್ಷಿಣ ಕರ್ನಾಟಕದ ವರೆಗಿನ ಜನರು ಜಾತ್ರೆಯ ಕಾಲಕ್ಕೆ ಕಂಡು ಬರುತ್ತಾರೆ. ಅಲ್ಲಿ ಜೋಗತಿಗಳಿಗೆ ವಿಶಿಷ್ಟ ಸ್ಥಾನವಿದ್ದು ಅವರಿಗೆ ಧಾರ್ಮಿಕ ಮಹತ್ವವಿರುತ್ತದೆ.

ವೇಶ್ಯಾವೃತ್ತಿಯನ್ನು ಆಚರಿಸುವ ಎಷ್ಟೋ ಜನ ಜೋಗತಿಯರು ಮತ್ತು ದೇವದಾಸಿಯರು ಎಲ್ಲಮ್ಮ ದೇವಸ್ಥಾನಕ್ಕೆ ನಡೆದುಕೊಳ್ಳುತ್ತಾರೆ. ಅದೂ ಮುಖ್ಯವಾಗಿ ಹುಣ್ಣಿವೆಗಳ ದಿವಸ (ಕಾಮನ ಹುಣ್ಣಿವೆ ಹೊರತು ಪಡಿಸಿ). ಬನದ ಹುಣ್ಣಿಮೆ ಮತ್ತು ಭಾರತ ಹುಣ್ಣಿಮೆಗಳಲ್ಲಿ ವಿಶೇಷವಾಗಿ ಜನರು ಸೇರುತ್ತಾರೆ. ಅಂಥ ಭಕ್ತರಲ್ಲಿ ಮುಂದುವರಿದವರು, ಹಿಂದುಳಿದವರು, ಅಜ್ಞರು, ತಜ್ಞರು, ಬ್ರಾಹ್ಮಣರು, ಹರಿಜನರು, ಬಡವರು,

ಸಿರಿವಂತರು ಎಲ್ಲರೂ ಸೇರುತ್ತಾರೆ. ಕಾಲದ್ದಕ್ಕೆ ಇತ್ತೀತ್ತಲಾಗಿ ಮಹಮ್ಮದೀಯ ಪಂಥದವರೂ ಈ ದೇವಸ್ಥಾನಕ್ಕೆ ಹೊಂದಿಕೊಳ್ಳಲು ಪ್ರಾರಂಭಿಸಿದ್ದಾರೆ. ಕನ್ನಡದಲ್ಲಿ ಒಂದು ಗಾದೆ ಮಾತು ಇದೆ. ಅದು ಯಾವುದೆಂದರೆ ''ಎಲ್ಲಮ್ಮನದರಲ್ಲೇನಿದೆ ಮುಲ್ಲಾನದು''. ಆದಾಗ್ಯೂ ಮಹಮ್ಮದೀಯರು ಹಿಂದೂ ಪಂಥಗಳಲ್ಲಿ ಇತರೆಡೆ ಹೊಂದಿಕೊಳ್ಳುತ್ತಿರುವಂತೆ ಇಲ್ಲಿಯೂ ಬಿಡಾರ ಬಿಟ್ಟಿದ್ದಾರೆಂದು ಎಲ್ಲಮ್ಮನ ಗುಡ್ಡಕ್ಕೆ ಹೋದಾಗ ತಿಳಿಯಿತು.

**ಜೋಗತಿ ಮತ್ತು ದೇವದಾಸಿ ಇವರಲ್ಲಿ ಹೋಲಿಕೆ ಮತ್ತು ವ್ಯತ್ಯಾಸ :**

ಜೋಗತಿಯರಲ್ಲಿ ವೇಶ್ಯಾ ಪದ್ಧತಿಯನ್ನು ಎತ್ತಿಕೊಳ್ಳುವವರಿದ್ದಾರೆಂದು ಈ ಮೊದಲೇ ಹೇಳಲಾಗಿದೆ. ಆದರೆ ಎಲ್ಲ ಜೋಗತಿಯರೂ ದೇವದಾಸಿಯರಾಗಲೀ ಅಥವಾ ವೇಶ್ಯಾ ಪದ್ಧತಿಯನ್ನು ಅನುಸರಿಸುವವರೆಂದಾಗಲೀ ತಿಳಿದುಕೊಳ್ಳಬಾರದು. ಈ ಮೊದಲೇ ಹೇಳಿದಂತೆ ಜೋಗತಿಯರಲ್ಲಿ ಸೂಳೆ ಮುತ್ತುಗಳನ್ನು ಕೊರಳಲ್ಲಿ ಕಟ್ಟಿಕೊಳ್ಳುವವರು ವೇಶ್ಯಾ ಪದ್ಧತಿಯನ್ನು ಅನುಸರಿಸುವವರು ಎಂದು ನಿಶ್ಚಿತವಾಗಿ ಗೊತ್ತಾಗುತ್ತದೆ. ಅದೇ ವೇಳೆಗೆ ಜೋಗತಿ ಪದ್ಧತಿಯು ವೇಶ್ಯಾ ಪದ್ಧತಿಗೆ ಸ್ತ್ರೀ ಪುರುಷರನ್ನು ಆಕರ್ಷಿಸುವದೆಂಬುದರಲ್ಲಿ ತಥ್ಯವಿದೆ. ಆ ರೀತಿಯಿಂದ ನೋಡಿದರೆ ಜೋಗತಿ

ಪದ್ಧತಿಯು ಮೂಲತಃ ಮತ್ತೊಂದು ಹೆಸರಿನಲ್ಲಿ ದೇವದಾಸಿ ಪದ್ಧತಿಯೇ ಆಗಿದೆ.

ಜೋಗತಿ ಪದ್ಧತಿಯು ಸಾಮಾಜಿಕ ಮತ್ತು ಸಾಂಸ್ಕೃತಿಕ ಮಹತ್ವಗಳು ನಮ್ಮ ಸಮಾಜದಲ್ಲಿ ಬಹಳ ದಿವಸಗಳಿಂದ ಅತಿ ಮಹತ್ವದ ಪಾತ್ರಗಳನ್ನು ಆಡಿರುವದರಿಂದ ಅವುಗಳ ಬಗ್ಗೆ ಸ್ವಲ್ಪ ಹೇಳುವದು ಅವಶ್ಯವಿದೆ. ಜೋಗತಿಯರು ಸಮಾಜದಲ್ಲಿ ನೀತಿ, ನಡತೆ, ಮತ್ತು ಧರ್ಮಗಳನ್ನು ಜನರಲ್ಲಿ ಹೆಚ್ಚಿಸುವಲ್ಲಿ ಮಹತ್ವದ ಕೆಲಸಗಳನ್ನು ಮಾಡಿದ್ದಾರೆ. ಧರ್ಮದ ಹೆಸರಿನಲ್ಲಿ ನಪುಂಸಕರು, ಬಡವರು ವಿಧವೆಯರು, ಅಂಗವಿಕಲರು ಬದುಕನ್ನು ನಡೆಸಲಿಕ್ಕೆ ಅನುಕೂಲವಾಗಿದೆ.

ಜೋಗತಿಯರಲ್ಲಿ ಮತ್ತು ದೇವದಾಸಿಯರಲ್ಲಿ ಇರುವ ಅತಿ ಮಹತ್ವದ ವ್ಯತ್ಯಾಸವೆಂದರೆ ಜೋಗತಿಯರು ಕೇವಲ ಎಲ್ಲಮ್ಮನ ಪಂಥವನ್ನು ಪ್ರಸಾರ ಮಾಡತಕ್ಕಂಥವರು. ಆಚಾರವಂತಿಕೆಯಿಂದ ಅವರು ಧಾರ್ಮಿಕ ಭಿಕ್ಷುಕರಾಗಿದ್ದಾರೆ. ಆದರೆ ದೇವದಾಸಿಯರು ಕೆಲವೊಂದು ದೇವಾಲಯಗಳ ದೇವರುಗಳ ಹೆಸರಿನಲ್ಲಿ ಬದುಕುತ್ತಾರೆ. ಆದ್ದರಿಂದ ಜೋಗತಿ ಪದ್ಧತಿ, ದೇವದಾಸಿ ಪದ್ಧತಿ ಮತ್ತು ವೇಶ್ಯಾವೃತ್ತಿಗಳಲ್ಲಿ ಮೂಲತಃ ಮಹತ್ತರವಾದ ಅಂತರವಿದೆ. ದೇವದಾಸಿ ಪದ್ಧತಿಯಂತೆ ಜೋಗತಿ ಪದ್ಧತಿಯೂ ಅಳಿದು ಹೋಗುತ್ತಿದೆ. ವೇಶ್ಯಾವೃತ್ತಿಯು ಮಾತ್ರ ಬೇರೆ ಮಾರ್ಗಗಳಿಂದ ಉಳಿದುಕೊಳ್ಳುತ್ತಿದೆ.

ಜೋಗಪ್ಪ ಜೋಗತಿಯರು ೪-೫ ಜನರು ಕೂಡಿ ಚೌಡಿಕೆ ಎಂಬ ವಾದ್ಯವನ್ನು ನುಡಿಸುತ್ತಾ ಹಿಮ್ಮೇಳ-ಮುಮ್ಮೇಳ

ಮಾಡಿಕೊಂಡು ಹಾಡುತ್ತಾ ಕುಣಿಯುತ್ತಾರೆ. ಪುರುಷರು ಜೋಗಪ್ಪ ಆದ ನಂತರ ಅವರಿಗೆ ಮದುವೆ ಮಾಡಿಕೊಳ್ಳಲಿಕ್ಕೆ ಬರುವದಿಲ್ಲ. ಆದರೆ ಮದುವೆ ಆದ ನಂತರ ಜೋಗಪ್ಪ ಆಗಬಹುದು. ಶ್ರೀ ರೇಣುಕಾದೇವಿಯ ಕೋಪಕ್ಕೆ ತುತ್ತಾದವರು ನಪುಂಸಕರಾಗುತ್ತಾರೆ ಎಂಬ ನಂಬಿಕೆಯೂ ಜನ ಸಾಮಾನ್ಯರಲ್ಲಿದೆ. ನಪುಂಸಕತನ, ಅನಾರೋಗ್ಯ, ತಲೆಯಲ್ಲಿಯ ಕೂದಲುಗಳು ಜಡಿಗಟ್ಟುವದು ಮುಂತಾದವುಗಳನ್ನು ಅವರು "ಎಲ್ಲಮ್ಮನ ಕಾಡಾಟ" ಎಂದು ಕರೆಯುತ್ತಾರೆ.

---

# ಆಧಾರ ಗ್ರಂಥಗಳು


| | |
|---|---|
| Durant, will | Our Oriental Heritage Simon and Schuster. New York.1954. |
| Gurumurthy, K. G. | Devadasi Custom in Peasant Context (in Press) 1980. |
| Kadetotad, N. K. | Religion and Society among the Harijans, Karnatak University, Dharwad 1977. |
| Karve, Iravati. | Hindu Society Deccan College, Poona-1961. |
| Kroeber A. L. | Anthropology, Oxford and I. B. H. Publishing Co., Bombay 1978. |
| Majumdar, R.C. | (Ed.) The Vedic Age. Bharatiya Vidya Bhavan, Bombay, 1971. |
| Patil, B. R | Devadasis. The Indian Journal of Social Work. January, 1977. |

| | |
|---|---|
| | The Jogatis. Man in India Journal, Ranchi, March, 1977. |
| Thurston E. | Castes and Tribes of Southern India, Madras Government Press. Madrass 1909. |
| ಕನ್ನಡ ಅಧ್ಯಯನ ಸಂಸ್ಥೆ. | ಕನ್ನಡ ವಿಶ್ವಕೋಶ, ಜೋಗತಿ ಸಂಪ್ರದಾಯ. ಸಂಪುಟ–೮, ಮೈಸೂರು ವಿ. ವಿ; ಮೈಸೂರು–೧೯೭೫. |
| ಗಿರಿಜಾ–ಶಂಕರ | ಶ್ರೀದೇವಿ ಮಹಾತ್ಮೆ, ಬಿ. ಜಿ. ಸಂಕೇಶ್ವರ. ಬಡಾವಣೆ, ಗದಗ–೧೯೬೪. |
| ಹಿರೇಮಠ ಗುರುಪಾದ ಸ್ವಾಮಿ— | ಪುಣ್ಯ ಕ್ಷೇತ್ರ ಶ್ರೀ ಎಲ್ಲಮ್ಮ ಗುಡ್ಡ. ಜ್ಞಾನ ವಿಜ್ಞಾನ ಪ್ರಕಾಶನ, ಉಗರಗೋಳ ೧೯೭೮. |
| ಸಿದ್ಧಾಂತಿ ಶಿವಬಸವ ಶಾಸ್ತ್ರಿಗಳು ಪಂಚವಣ್ಣಿಗಿ ಬೃಹನ್ಮಠ. – | ರೇಣುಕಾ ದೇವಿಯ ಮಹಾತ್ಮೆ. ಎಲ್ಲಮ್ಮ ದೇವಸ್ಥಾನ ಕಮಿಟಿ, ಬೆಳಗಾಂವಿ–೧೯೬೭. |